

ಶ್ರೀಶ ನೀನಹುದೋ ಶೇಷಾಚಲವಾಸ ನೀನಹುದೋ ॥ ಪ ॥

ಶೇಷಶಯನ ಸುರೇಶವಂದಿತಾಽ ಶೇಷ ಜನರನು ಪಾಲಿಸಿ ಬಡ್ಡಿ
ಕಾಸುಸೇರಿಸಿ ಗಂಟುಕಟ್ಟುವ ಕ್ಯಾಸಕ್ಕಿ ತಿಮ್ಮಪ್ಪ ನೀನೇ ॥ ಅ.ಪ ॥

ತಂದೆ ನೀನಹುದೋ ಕರುಣಾಸಿಂಧು ನೀನಹುದೋ
ಅಂದು ದೃಪದನ ನಂದನೆಯು ಎಳೆ
ತಂದು ಘಾಸಿಯಮಾಡುತಿರಲು ಮುಂದೆ ಬಂದು ಅಕ್ಷಯ
ವೆಂದು ಸಲಹಿದ ಮಂದಹಾಸ ಮುಕುಂದ ನೀನೆ 1

ಧೀರ ನೀನಹುದೋ ಜಗದೋದ್ಧಾರ ನೀನಹುದೋ
ಬಾರಿ ಬಾರಿಗೆ ನಿನ್ನ ಪಾದಸುವಾರಿಜಂಗಳ
ಸೇರಿದ ಭಕ್ತರ ಘೋರ ದುರಿತವ ದೂರಗೈಸುವ
ಮಾರಜನಕ ಅಪಾರ ಮಹಿಮನೆ 2

ಧನ್ಯ ನೀನಹುದೋ ಸುರಮುನಿಮಾನ್ಯ
ನೀನಹುದೋ ಪನ್ನಗಾರಿವಾಹನ ಧರೆಯೊಳು
ಇನ್ನು ನಿನಗೆದುರಾರ ಕಾಣೆ ಪ್ರಸನ್ನ ನಾಗೆಲೊ
ಬಿನ್ನಹ ಕೇಳು ಪ್ರಸನ್ನ ವತ್ಸಲ ಶ್ರೀಹಯವದನ 3

—ಶ್ರೀವಾದಿರಾಜರು

# ತಿ. ತಿ. ದೇವಸ್ಥಾನಗಳು, ತಿರುಪತಿ.

# ಪ್ರಕಟನ ಶಾಖೆ

## ಮಾರಾಟಕ್ಕೆ ಸಿದ್ಧವಾಗಿರುವ ಅಮೂಲ್ಯ ಧಾರ್ಮಿಕ ಗ್ರಂಥ ರಾಶಿ

### ಕನ್ನಡ :

ಶ್ರೀನಿವಾಸನ ಹಾಡುಗಳು- ಭಾಗ-2 (ಶ್ರೀಪಾದರಾಜರು, ವ್ಯಾಸರಾಯರು, ವಾದಿರಾಜರು, ಕನಕದಾಸರು) 4–50

ಸೃಷ್ಟಿಪ್ರಕರಣ (ದಾಸಸಾಹಿತ್ಯದಲ್ಲಿ ವಿವರಿಸಿದಂತೆ) –ವಿ. ಬಾದರಾಯಣ ಮೂರ್ತಿ 12–50

ಪುರಂದರೋಪನಿಷತ್ (ಪುರಂದರದಾಸರ ಏಳುಕ್ತಿ ವಿವರಣೆ) –ಬನ್ನಂಜೆ ಗೋವಿಂದಾಚಾರ್ಯ 7–00

ಕೇಶವಾದಿ ರೂಪಗಳು (ಕನ್ನಡ, ತೆಲುಗು, ಆಂಗ್ಲ, ಹಿಂದಿ, ಚಿತ್ರವಿವರಣೆ) –ಸಂ. ಕೆ. ಅಪ್ಪಣ್ಣಾ ಚಾರ್ಯ 3–75

ಕರ್ನಾಟಕ ಹರಿದಾಸರು(ಕನ್ನಡ, ತೆಲುಗು, ಆಂಗ್ಲ, ಹಿಂದಿ, ಚಿತ್ರವಿವರಣೆ) –ಸಂ. ಕೆ. ಅಪ್ಪಣ್ಣಾ ಚಾರ್ಯ 2–25

ಗೀತಾಸಾರೋದ್ಧಾರ –ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳು 4–00

ಸ್ತೋತ್ರ ಕುಸುಮಮಾಲಾ –ಸಂ. ವೆಂಕಟಾಚಲ 3–00

ಶ್ರೀ ವೆಂಕಟೇಶ್ವರ ಸುಪ್ರಭಾತ, ತ್ರಿವರ್ಣಚಿತ್ರ ವಿವರಣೆ 10–00

ಆಚಾರಗಳು ಆಡಂಬರಗಳು ––ಕೆ. ಚಂದ್ರಮೌಳಿ 0–40

ಶ್ರೀ ವೆಂಕಟೇಶ್ವರ ಸುಪ್ರಭಾತ (ವಿವರಣೆ ತಾತ್ಪರ್ಯ) 0–50

" " (ಕನ್ನಡ ಲಿಪಿಯಲ್ಲಿ) 0–12

#### ಮಕ್ಕಳಿಗಾಗಿ :

| | | |
|---|---|---|
| ಶ್ರೀಪಾದರಾಜರು | –ಎಂ. ಎಸ್. ಗುಂಡೂರಾವ್ | 0–75 |
| ಮಹಿಪತಿದಾಸರು | –ಶಾನಭಾಗ | 0–85 |
| ಪ್ರಸನ್ನ ವೆಂಕಟದಾಸರು | –ವಿ. ಬಾದರಾಯಣಮೂರ್ತಿ | 0–80 |
| ಗೋಪಾಲದಾಸರು | –ರುಕ್ಮಿಣಿಗಿರಿಮಾಜಿ | 0–75 |

### ಹಿಂದಿ :

ಶ್ರೀ ವೆಂಕಟೇಶ್ವರ ಜೀ ಕೆ ಸುಪ್ರಭಾತ್ ಸ್ತೋತ್ರ –ಡಾ॥ ಎಂ. ಸಂಗಮೇಶ

ಶ್ರೀ ವೆಂಕಟೇಶ್ವರ ಸುಪ್ರಭಾತ್ (ಸಚಿತ್ರ)

ತೀರ್ಥರಾಜ ತಿರುಪತಿ ಡಾ॥ ಎಂ. ಸಂಗಮೇಶ

### ಸಂಸ್ಕೃತ :

ಶ್ರೀ ವೇಂಕಟೇಶ್ವರ ಸುಪ್ರಭಾತಂ

ಶ್ರೀ ವೇಂಕಟೇಶ್ವರ ಅಷ್ಟೋತ್ತರ ಸಹಸ್ರನಾಮ ಸ್ತೋತ್ರಾ

ಕಠೋಪನಿಷತ್ –ಡಾ॥ ಕೆ.ಸಿ. ವರದಾಚಾರಿ ಹಾಗೂ ಡಾ॥ ಡಿ. ತಾತಾಚಾರ್ಯ

ಮಾರ್ಕಂಡೇಯ ಸಂಹಿತಾ

ತತ್ತ್ವಸಂಖ್ಯಾನಂ –ಆರ್. ರಾಮಮೂರ್ತಿ ಶರ್ಮಾ

ಬ್ರಹ್ಮಸೂತ್ರ ಭಾಷ್ಯ (ಭಾಗ–1) –ಆರ್. ರಾಮಮೂರ್ತಿ ಶರ್ಮಾ

ಅಲಂಕಾರ ಸಂಗ್ರಹ ಸಂ–ಕೆ. ಭಾಸ್ಕರರಾವ್

ಸೀತಾರಾಮಾಂಜನೇಯಂ –ಡಾ॥ ಡಿ. ಅರ್ಕಸೋಮಯಾಜಿ

ಪ್ರಶ್ನೋಪನಿಷತ್

ಶ್ರೀಮತ್ ವೈಖಾನಸೇ ಭಗವಚ್ಛಾಸ್ತ್ರೇ ಕ್ರಿಯಾಧಿಕಾರಃ ಸಂ–ಡಾ॥ ಎಸ್.ಬಿ. ರಘುನಾಥಾಚಾರ್ಯ

**ಅಂಚೆ ವೆಚ್ಚ ಪ್ರತ್ಯೇಕ, ವ್ಯಾಪಾರಿಗಳಿಗೆ ಆಕರ್ಷಕ ಕಮೀಷನ್ ಉಂಟು.**

ಕೂಡಲೇ

**ಡೆಪ್ಯೂಟಿ ಎಕ್ಸಿಕ್ಯೂಟಿವ್ ಆಫೀಸರ್**

ಸೇಲ್ಸ್‌ವಿಂಗ್ ಆಫ್ ಪ

ತಿ. ತಿ. ದೇ




ಗೌರವ ಸಂಪಾದಕರು :

ಎಸ್. ಲಕ್ಷ್ಮೀನಾರಾಯಣ ಐ.ಎ.ಎಸ್.,

ಸಂಪಾದಕ :

ಕೆ. ಸುಬ್ಬಾರಾವು, ಎಂ.ಎ.,

ಉಪಸಂಪಾದಕ :

ಪಿ. ಎಸ್. ಶ್ರೀನಿವಾಸನ್ ಎಂ.ಎ.,

ಮುದ್ರಣ :

ಎಂ. ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ
ಮಿಕ್ಕ ವಿವರಗಳಿಗೆ
ಸಂಪಾದಕರು,
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ


ಸಪ್ತಗಿರಿಯ ಎಲ್ಲ ಭಾಷೆಯ ಪ್ರತಿಗಳೂ ಎಲ್ಲ ತಿ.ತಿ.ದೇ. ವಿಚಾರಣಾಕೇಂದ್ರಗಳಲ್ಲಿ ದೊರೆಯುವುವು.

**ಬಿಡಿ ಪ್ರತಿ ೧-೦೦**

**ವಾರ್ಷಿಕ ಚಂದಾ ೧೨-೦೦**

ಸಪ್ತಗಿರಿಯಲ್ಲಿ ಪ್ರಕಟವಾಗುವ ಲೇಖನಗಳಲ್ಲಿನ ಅಭಿಪ್ರಾಯಗಳು ಸಂಪಾದಕ ವರ್ಗದ, ಪತ್ರಿಕೆಯ, ಅಭಿಪ್ರಾಯಗಳೇ ಆಗಿರಬೇಕು ಎಂದಿಲ್ಲ. –ಸಂ॥


ಸಂಪುಟ ೧೯] ಮಾರ್ಚ್ ೧೯೮೭ [ಸಂಚಿಕೆ ೧೦


# ವಿಷಯಸೂಚಿ



ಮುಖಚಿತ್ರ : ನವಗ್ರಹಗಳೊಂದಿಗೆ ಅವುಗಳ ನಿಯಂತ್ರಕ ದೈವ ಶ್ರೀ ವೆಂಕಟೇಶ್ವರ ಸ್ವಾಮಿ –ಚಿತ್ರ ಶ್ರೀ ಕೆ. ಜಗದೀಶ್.

ಹಿಂಬದಿಯಲ್ಲಿ: ನಾಗಲಾಪುರಂ ದೇವಾಲಯ ದೃಶ್ಯ. ಸೂರ್ಯಪೂಜೆಯ ಸಂದರ್ಭ.

ಒಳಗಡೆ: ಶ್ರೀ ಕೋದಂಡರಾಮಸ್ವಾಮಿ ಬ್ರಹ್ಮೋತ್ಸವದಲ್ಲಿ ಗರುಡೋತ್ಸವ. ರಥಸಪ್ತಮಿಯಲ್ಲಿ ಸೂರ್ಯಪ್ರಭವಾಹನದಲ್ಲಿ ತಿರುಮಲೆಸ್ವಾಮಿ.

# ಸಂಪಾದಕೀಯ

ಕಾಲಚಕ್ರ ತಿರುಗುತ್ತಿದೆ. ಒಂದು ಬಾರಿ ಪೂರ್ತಿ ತಿರುಗಿ ಮರಳಿ ಮೊದಲಿಗೇ ಬಂದಿತು.
ಚಕ್ರ ಕಾಲಾನುಗುಣವಾಗಿ ತಿರುಗುತ್ತಲೇ ಇದ್ದರೂ ಪ್ರತಿ ಭ್ರಮಣೆಯಲ್ಲೂ ಒಂದು ಹೊಸ ಅರ್ಥ ಪರಮ
ಕಂಡು ಬರುತ್ತಲೇ ಇರುವುದು.

ಕ್ಷಯವೋ ಅಕ್ಷಯವೋ ತಿಳಿಯದ ಹಳೆಯ ವತ್ಸರ ಹಿಂದಿಲ್ಲದ ಹೋರಾಟದ ನಿರಂತರ ಭಯ
ಘಾತುಕ ಸಂಘಟನೆಗಳಿಂದ ಮಾನವೀಯ ಮೌಲ್ಯಗಳನ್ನೇ ಮಸಿ ಮಾಡುತ್ತ ಕ್ಷಯವತ್ಸರವಾಗಿಯೇ
ಯಿತು. ಮನೆಯ ಬೆಂಕಿ ಊರಿಗೆ ಕೊಳ್ಳಿ ಯೆಂಬಂತೆ ನಮ್ಮೊಳಗೇ ಬೆಳೆದು ನಿಂತ ಮಾರಣ ಹೋವ
ಯಿಂದಾಗಿ ಮನುಷ್ಯ ಸಂತತವೂ ಸಂದೇಹ ಗ್ರಸ್ತನಾಗಿಯೇ ನಡೆಯುವಂತಾಯಿತು. ಹಲವಾರು ಆಶಾ
ಗಳು ಅಕ್ಷಯ ಎಂದರೂ ಇದು ಬಹುಜನ ಕ್ಷಯವೆಂದದ್ದು ಅನ್ವರ್ಥಕವೆಂದೇ ಅನ್ನಿಸಿತು.

ಈಗ ಬರುತ್ತಿರುವ ಪ್ರಭವಕ್ಕೆ ಕೆಲವು ವೈಶಿಷ್ಟ್ಯಗಳುಂಟು. ಕಾಲರೂಪಿಯೂ ಕಾಲಾತ್ಮ
ಆದ ಸೂರ್ಯಭಗವಾನನ ಹುಟ್ಟು ಈ ಪ್ರಭವನಾಮ ಸಂವತ್ಸರದಲ್ಲಿಯೇ ಎಂದರೆ ಹಿಂದಿನ ಕ್ಷಯ
ವಿಲಯಕ್ಕೂ, ಪ್ರಭವ ನೂತನ ವಿಶ್ವಾವಿರ್ಭಾವಕ್ಕೂ ಸಂಕೇತಗಳೂ ಆಗಬಹುದು. ನಭೋಮಣಿಯ
ಸಂವತ್ಸರವೆಂದು ಪ್ರಭವವನ್ನು ಗುರುತಿಸಿರುವುದು ಪ್ರಳಯಾನಂತರ ಸೃಷ್ಟಿ ಸೂರ್ಯಾವಿರ್ಭಾವ
ಪ್ರಾರಂಭವೆನ್ನುವುದಕ್ಕೆ ಇರಬೇಕು "ಆಕಾಶಾದ್ವಾಯುಃ ವಾಯೋರಗ್ನಿಃ ಅಗ್ನೇರಾಪಃ ಅದ್ಭ್ಯಃ ಪೃ
ಎಂದು ಹೇಳುವ ಸೃಷ್ಟಿಕ್ರಮದಲ್ಲೂ ಸಹ ಅಗ್ನಿ ಮುಖ ತೇಜಸ್ತತ್ತ್ವದಿಂದಲೇ ಕಣ್ಣಿಗೆ ಕಾಣುವ
ರಚನೆ ಆರಂಭವಾಗಿರಬೇಕೆನ್ನಿಸುತ್ತದೆ.

ಅಹೋರಾತ್ರಿಗಳೂ, ಶುಕ್ಲ ಕೃಷ್ಣ ಪಕ್ಷಗಳೂ, ಷಡೃತುಗಳೂ, ದ್ವಾದಶಮಾಸಗಳೂ ಇ
ಕಾಲ ಪರಿಗಣನೆಯಲ್ಲಿ, ಆಯಾ ಧರ್ಮಗಳು ನಮಗೆ ತಿಳಿದವಾದ್ದರಿಂದ ಆಯಾ ಕಾಲ ಪ್ರಕೃತಿಯನ್ನು ಸಮ
ಕೊಳ್ಳಬಹುದು. ಹಲವು ಸಹಸ್ರ ಬಾರಿ ವರ್ತಿಸುತ್ತಿರುವ ವತ್ಸರಾತ್ಮಕ ಕಾಲಚಕ್ರದಲ್ಲಿ ಅರವತ್ತೇ
ಕಾಲುಗಳೇಕೆ ಎಂಬುದು ಪ್ರಶ್ನೆ. ನಾರದ ಸಂತಾನನಕ್ಷತ್ರ ರಾಶಿಯಾದಂತೆ ಕಥೆಗಳು ಹಲವಿ
ಸಂದೇಹವುಂಟಾದರೆ, ಅತಿಶಯೋಕ್ತಿಯಲ್ಲ.

ಮಹರ್ಷಿಗಳೂ, ಮಹಾಪುರುಷರೂ ಜೀವಿಸಿದರೆನ್ನುವ ಹಲವು ಸಹಸ್ರವರ್ಷಗಳೆನ್ನುವಲ್ಲಿ ದೀ
ಕಾಲವೆಂದು ಧ್ವನಿಯನ್ನು ಸ್ವೀಕರಿಸಿದರೆ ಅರವತ್ತು ಅರೆಕಾಲಿನ ಸಂವತ್ಸರ ಚಕ್ರಕ್ಕೆ ಸಹೇ
ಸಮಾಧಾನ ದೊರೆಯಬಹುದು.

ಮನುಷ್ಯನ ಜೀವನಚಲ್ಲಿ–ಆ ಮಾತಿಗೆ ಬಂದರೆ ಮಣ್ಣಿನಲ್ಲಿ ಮಣ್ಣಿನಿಂದ ಹುಟ್ಟಿದ ಪ್ರತಿಯೊಂ
ಜಾತಕವೂ ನವಗ್ರಹಾಧೀನವೆಂಬುದು ಸರ್ವದೇಶೀಯ ಭಾವನೆ. ಈ ಚರಾಚರ ಜಗತ್ತಿನಲ್ಲಿ ಸೂ
ಮೊದಲಾದ ನವಗ್ರಹಗಳು ತಮ್ಮ ತಮ್ಮ ಆಕರ್ಷಣೆ. ಸನ್ನಿಕರ್ಷಣೆಗಳಿಂದ ನಮಗಿನ್ನೂ ಅರ್ಥವಾ
ರೀತಿಯಲ್ಲಿ ಪ್ರಭಾವವನ್ನು ಬೀರುತ್ತಿವೆ. ಪ್ರತಿಗ್ರಹಕ್ಕೂ ಇರುವ ಪ್ರತ್ಯೇಕ ಪ್ರಭಾವಕಾಲವನ್ನು ಮ
ದಶೆಯೆಂದು ವಿಭಜಿಸಿದರು. ಛಾಯಾಗ್ರಹಗಳನ್ನೂ ಸೇರಿಸಿಕೊಂಡಂತೆ ಎಲ್ಲ ಗ್ರಹಗಳ ಒಟ್ಟು ಮ
ದಶಾಕಾಲಪರಿಮಿತಿ 120 ವರ್ಷಗಳು. ಹಲವರು ಈ ಅವಧಿಗೂ ಮೀರಿ ಬದುಕಬಹುದಾದರೂ ಮ
ಮನುಷ್ಯನಿಂದ ಬ್ರಹ್ಮನವರೆಗೆ ಶಾಸ್ತ್ರಗತ ಆಯುಸ್ಸು ಆಯಾ ಕಾಲಪರಿಗಣನೆಯಲ್ಲಿ 100 ವರ್ಷ
ಎಲ್ಲ ಗ್ರಹಗಳ ಕೂಟ, ಕಾಟ, ಗಳನ್ನು ಪಡೆದು ಮನುಷ್ಯ ಬದುಕಬಹುದಾದ ಸ್ಥಿತಿ 60 ವರ್ಷಗಳು ಮ
ವೆಂದೇ ತೋರುತ್ತದೆ. ಷಷ್ಟಿ ಪೂರ್ತಿ, ಸಹಸ್ರಮಾಸ ಜೀವಿತ ಸಂಭಾವನೆಗಳು ಒಟ್ಟು ಜೀವನ ಪ
ಯನ್ನು ಅಧಿಗಮಿಸಿದ ಜೀವಶಕ್ತಿಗೆ ಮಾಡುವ ಗೌರವ. ಜ್ಯೋತಿಶ್ಶಾಸ್ತ್ರ ಸಹ 60 ವರ್ಷ ದಾಟಿದರೆ ಪೂ
ಯುವೆನ್ನುವುದನ್ನು ಕೇಳಿದ್ದೇವೆ. ಹೀಗಾಗಿ ಒಟ್ಟು ಜೀವನ 60 ವರ್ಷಗಳೇ. ಎರಡನೇ ಆವರ್ತನದಲ್ಲಿ ನಿ
ಜೀವನವನ್ನು ಪಕ್ವ ಗೊಳಿಸಿಕೊಳ್ಳುವವರನ್ನು ಪೂರ್ಣಕಾಮರೆಂಪೂ ಚರಿತಾರ್ಥರೆಂದೂ ಬಗೆಯು
ಕ್ಷಯ–ಪ್ರಭವಾತ್ಮಕವಾದ 60 ವರ್ಷದ ಕಾಲಪರಿಗಣನೆ ಸಾಕು. ಎಂತಲೇ ಪೂರ್ವಿಕರು, ಅಂಕೆಗಳಿಂದ
ಸಂಕೇತಗಳಿಂದ 60 ಸಂವತ್ಸರ ಕಾಲಚಕ್ರವನ್ನು ಏರ್ಪಡಿಸಿದರು.

ದಿವಾಕರ ಪ್ರಭವಾತ್ಮಕವಾದ ಈ ಪ್ರಭವ ಅಗ್ನಿಮುಖವಾಗಿ ಅರ್ಭಟವುಂಟಾಗಿಸದೆ ವಿದ್ಯಾ
ವಿಜ್ಞಾನ ಸುಖ ಪ್ರಚೋದಕವಾಗಿರಲೆಂದು ಕಲಿಯುಗ ನಾರಾಯಣನನ್ನು ಪ್ರಾರ್ಥಿಸುವ.

ಶಂ ನೋಽಸ್ತು ಶಂ ದ್ವಿಪದೇಶಮ್ ಚತುಷ್ಪದೇ ಓಂಶ್ಶಾಂತಿಶ್ಶಾಂತಿಶ್ಶಾಂತಿಃ

# ಯುಗಾದಿ ಸಂಭ್ರಮ

ುಗಾದಿ ನವವರ್ಷದಾದಿ. ಎಲ್ಲೆಲ್ಲೂ ಊಷ, ಸಂಭ್ರಮ, ಚೈತ್ರದ ಅರು- ದಯವಾಗುವ ದಿನವೇ ಚಾಂದ್ರಮಾನ ಾದಿ. ಋತುರಾಜನಾದ ವಸಂತನು ಲ್ಲಿ ಅಡಿಯಿಡುವ ಮಂಗಳ ೂರ್ತದ ಕ್ಷಣವದು. ಎಲ್ಲೆಲ್ಲೂ ಆನಂದ ಕನ. ನಿಸರ್ಗವೇ ಮರುಹುಟ್ಟು ಪಡೆ ರುತ್ತದೆ. ಗಿಡ-ಮರಗಳಿಂದ ಎಲೆ ್ನದುರಿಸಿದ ಶಿಶಿರ ಋತು ಕಳೆದು ಚಿಗುರು. ಎಲೆ, ಹೂವು, ಫಲಗಳಿಗೆ ವಾಗಿ ಚೈತ್ರದ ಆಗಮನ ಸಂತಸಕರ ರುತ್ತದೆ. ಮಕ್ಕಳಿಗೆ ಚೆಂದ ಚೆಂದದ ಬಲೆ, ಸ್ತ್ರೀಯರಿಗೆ ಬಣ್ಣ ಬಣ್ಣದ ಕುಪ್ಪಸ ದೊರೆಯುವ ಪರ್ವಕಾಲ. ಯುವಕ - ಯುವತಿಯರ ಕಲ್ಯಾಣ- ೋತ್ಸವಗಳು ವಿಜೃಂಭಿಸಿ ಅವರ ಗಳು ಅರಳುತ್ತವೆ. ಮಠ-ಮಂದಿರ ವಿಶೇಷ ಪೂಜೆ, ಉತ್ಸವಗಳು ನಡೆ ತ್ತವೆ. ಎಲ್ಲೆಲ್ಲೂ ಸಂತಸದ ವಾದ್ಯ ಷ್ಠಿಗಳು, ವಿನೋದ ಕೂಟಗಳು ಆರಂಭ ಗುತ್ತವೆ. ಯುಗಾದಿ ಸಂಭ್ರಮವು ವರ್ಷ ಇರಲಿ ಎಂಬುದೇ ಯುಗಾದಿಯ ೇತ.

## ಹ್ಮಾಂಡ ಸೃಷ್ಟಿ:

ಚೈತ್ರೇ ಮಾಸೇ ಜಗದ್ಬ್ರಹ್ಮಾ
ಸಸರ್ಜ ಪ್ರಥಮೇ ಹನಿ।
ಶುಕ್ಲ ಪಕ್ಷೇ ಸಮಗ್ರಂತು
ದಾ ಸೂರ್ಯೋದಯೇ ಸತಿ॥

ಚೈತ್ರ ಮಾಸದ ಶುಕ್ಲಪಕ್ಷದ ಮೊದಲ ಸೂರ್ಯೋದಯದ ವೇಳೆಯಲ್ಲಿಯೇ ಹ್ಮನಿಂದ ಈ ಬ್ರಹ್ಮಾಂಡ ಸೃಷ್ಟಿಯಾಯಿ ು ಬ್ರಹ್ಮ ಪುರಾಣದಲ್ಲಿ ಹೇಳಿದೆ. ಶ್ರೀ ಮಚಂದ್ರನು ಪಟ್ಟಾಭಿಷಿಕ್ತನಾಗಿ ಆದರ್ಶ ಮರಾಜ್ಯ ಆರಂಭಿಸಿದುದೂ ಚೈತ್ರಾದಿ ಂದೇ! ಶಾಲಿವಾಹನಶಕೆ ಮತ್ತು ವಿಕ್ರಮ ಗಳು ಯುಗಾದಿಯಂದೇ ಪ್ರಾರಂಭ ಗಿವೆ. ವರ್ಷದ ಶುಭಮುಹೂರ್ತದಲ್ಲಿ ಹೊಸ ಹೊಸ ಜೀವನೋಪಾಯಗಳನ್ನು, ವಿನೂತನ ಕಾರ್ಯಕ್ರಮಗಳನ್ನು ಆರಂಭಿ ಸುವರು. ಯುಗ-ಯುಗಗಳಿಂದಲೂ ಈ ದಿನ ಮಹತ್ಕಾರ್ಯಗಳು ನಡೆದಿವೆ ಎಂದು ನಮಗೆ ಪುರಾಣಗಳು, ಇತಿಹಾಸಗಳು, ಶಾಸನ ಗಳು ತಿಳಿಸುತ್ತವೆ.

ೀಮತಿ ಸುಮಿತ್ರಾ ಶಾನಭಾಗ

## ಹಬ್ಬದಾಚರಣೆ:

ಯುಗಾದಿ ಹಬ್ಬದ ಚಟುವಟಿಕೆಗಳು ಹಿಂದಿನ ದಿನವಾದ ಅಮಾವಾಸ್ಯೆಯಿಂದಲೇ ಪ್ರಾರಂಭವಾಗುತ್ತವೆ. ನೀರು ತುಂಬುವ, ಸುಣ್ಣ ಬಣ್ಣ ಹಚ್ಚುವ, ತಳಿರು ತೋರಣ ಕಟ್ಟುವ ಹೊಸ ಪರಿಸರವನ್ನು ಸೃಜಿಸುವರು. ಪ್ರತಿಪದೆಯಂದು ಮನೆಯವರೆಲ್ಲ ನಸುಕಿ ನಲ್ಲಿಯೇ ತೈಲಾಭ್ಯಂಗ ಸ್ನಾನಮಾಡಿ ಹೊಸ ಬಟ್ಟೆ ತೊಡುವರು. ಹೆಣ್ಣುಮಕ್ಕಳು ಮನೆ-ಅಂಗಳ ಸಾರಿಸಿ ರಂಗಿನ ರಂಗೋಲಿಯ ಶೃಂಗಾರ ಮಾಡುವರು.

ಕಳೆದ ವರ್ಷದ ಮತ್ತು ಹೊಸ ವರ್ಷದ ಪಂಚಾಂಗಗಳೆರಡನ್ನೂ ದೇವರ ಮುಂದೆ ಇರಿಸಿ ಪೂಜಿಸುವರು. ಹೋಳಿಗೆ-ತುಪ್ಪ, ಬೇವು-ಬೆಲ್ಲ ದೇವರಿಗೆ ನೈವೇದ್ಯ ಮಾಡುವರು ಹೊಸ ವರ್ಷವು ಶುಭಪ್ರದವಾಗಲೆಂಬ ನಂಬಿಕೆಯಿಂದ ಅಂದು ಭಾರೀ ಹೋಳಿಗೆ ಊಟ ಹೊಡೆಯುವ ಸಂಪ್ರದಾಯವಿದೆ. 'ಉಂಡದ್ದು ಯುಗಾದಿ, ಮಿಂದದ್ದು ದೀಪಾವಳಿ' ಎಂಬ ಗಾದೆಯೇ ರೂಢಿಯಲ್ಲಿದೆ.

## ಬೇವು-ಬೆಲ್ಲ:

ಯುಗಾದಿಯ ವಿಶೇಷವೆಂದರೆ 'ಬೇವು ಬೆಲ್ಲ' ಹಂಚುವುದು. ಇವೆರಡೂ ಜೀ ದಲ್ಲಿ ಬರುವ ಕಹಿ ಮತ್ತು ಸಿ ಸಂಕೇತ.

'ಜೀವನವೆಲ್ಲ ಬೇವು-ಬೆಲ್ಲ
ಎರಡೂ ಸವಿವನೆ ಕವಿಯಲ್ಲ'

-ಎಂದು ಕುವೆಂಪು ನುಡಿದಿದ್ದಾರೆ.

ಆರೋಗ್ಯ ದೃಷ್ಟಿಯಿಂದ ಸಂಜೀವಿನಿ ಎನಿಸಿದೆ. ಬೇವಿನೊಟ್ಟಿಗೆ ರಸಪ್ರಧಾನವಾದ ಬೆಲ್ಲ, ಶುಂಠಿ, ಸೇರಿಸುವುದುಂಟು. ಕರ್ನಾಟಕ... ವಾಗಿ ಬೇವಿನ ದಳಗಳನ್ನು ಬೇ ತೆಗೆದುಕೊಂಡು ಅದರಲ್ಲಿ ಸಕ್ಕರೆ ಣೆಯ ಹಿಟ್ಟು ಕೂಡಿಸಿ ಯಾಲಕ್ಕಿ, ಮೆಣಸು, ದಾಲಚಿನ್ನಿ ಇತ್ಯಾದಿ ಸೇರಿಸಿ ಯಾಗುವಂತೆ ಮಾಡುವರು.

ಈ ಬೇವು ಬೆಲ್ಲವು ಆರೋಗ್ಯದಾ ಗಿದ್ದರೂ ಇಷ್ಟರಿಂದಲೇ ಇದಕ್ಕೆ ಇಷ್ಟೋ ಮಹತ್ವ ಬರುತ್ತಿರಲಿಲ್ಲ. ಭಗವಾನ್ ರನು ಹಾಲಾಹಲ ವಿಷಪಾನ ಮಾಡಿ ದಿನವಾದ್ದರಿಂದ ಅದರ ದ್ಯೋತ ಎಲ್ಲರೂ ಬೇವನ್ನು ಸೇವಿಸುವದು ಯಲ್ಲಿದೆ.

ಯುಗ ಯುಗಾದಿ ಕಳೆದರೂ
ಯುಗಾದಿ ಮರಳಿ ಬರುತಿದೆ
ಹೊಸ ವರುಷಕೆ ಹೊಸ ಹರುಷವ
ಹೊಸತು ಹೊಸತು ತರುತಿದೆ

—ಡಾ॥ ದ.ರಾ. ಬೇಂದ್ರೆ

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

## ಮಂಗಾಪುರ.

ಶ್ರೀ ವೆಂಕಟೇಶ್ವರಸ್ವಾಮಿ ಪದ್ಮಾವತಿಯನ್ನು ವಿವಾಹವಾದ ಬಳಿಕ ತಿರುಮಲೆಗೆ ಆಗಮಿಸುವ ಮುನ್ನ ಆರುತಿಂಗಳಕಾಲ ತಂಗಿದ್ದ ಸ್ಥಳ. ತಿರುಮಲೆಯಲ್ಲಿನ ಧ್ರುವಮೂರ್ತಿಗಿಂತ 2 ಅಡಿ ಹೆಚ್ಚು ಎತ್ತರದ ಧ್ರುವಮೂರ್ತಿ ಇಲ್ಲಿದ್ದು, ಈ ಗುಡಿಯನ್ನು ಹಾದು ತಿರುಮಲೆಗೆ ಮೆಟ್ಟಿಲ ಮೂಲಕ ಏರಬಹುದು. ತಿರುಪತಿ-ಮದನಪಲ್ಲಿ ರಸ್ತೆಯಲ್ಲಿ ತಿರುಪತಿಯಿಂದ ಆರು ಮೈಲಿದೂರದ ಶ್ರೀನಿವಾಸ ಮಂಗಾಪುರಕ್ಕೆ ಚಂದ್ರಗಿರಿ ಹಾಗೂ ತಿರುಪತಿಗಳಿಂದ ಬಸ್ ಸೌಕರ್ಯವಿದೆ.

### ದರ್ಶನ ಹಾಗೂ ಸೇವಾ ವಿವರಗಳು

| | ಭಾನು, ಸೋಮ, ಮಂಗಳ, ಬುಧ, ಗುರು ಹಾಗೂ ಶನಿವಾರಗಳ ಕಾರ್ಯಕ್ರಮ. | ಶುಕ್ರವಾರಗಳಲ್ಲಿ |
|---|---|---|
| ಸುಪ್ರಭಾತ | ಪ್ರಾ 5–00 ಪ್ರಾ 5–30 | ಪ್ರಾ 5–00 ಪ್ರಾ 5–30 |
| ವಿಶ್ವರೂಪ ಸರ್ವದರ್ಶನ | ಪ್ರಾ 5–30 ಪ್ರಾ 6–00 | ಪ್ರಾ 5–30 ಪ್ರಾ 6–00 |
| ತೋಮಾಲ, ಕೊಲುವು ಪಂಚಾಂಗಶ್ರವಣ | ಪ್ರಾ 6–00 ಪ್ರಾ 6–30 | ಪ್ರಾ 6–00 ಪ್ರಾ 6–30 |
| ಸಹಸ್ರನಾಮಾರ್ಚನೆ | ಪ್ರಾ 6–30 ಪ್ರಾ 7–00 | ಪ್ರಾ 6–30 ಪ್ರಾ 7–00 |
| ಮೊದಲನೇ ಗಂಟೆ | ಪ್ರಾ 7–00 ಪ್ರಾ 7–30 | ಪ್ರಾ 7–00 ಪ್ರಾ 7–30 |
| ಸರ್ವದರ್ಶನ | ಪ್ರಾ 7–30 ಪ್ರಾ 10–00 | *ಅಭಿಷೇಕ ಪ್ರಾ 7–30 ಪ್ರಾ 8–30 |
| | | ಸಮರ್ಪಣ ಪ್ರಾ 8–30 ಪ್ರಾ 9–30 |
| 2ನೇ ಅರ್ಚನೆ | | |
| 2ನೇ ಗಂಟೆ | ಪ್ರಾ 10–00 ಪ್ರಾ 10–30 | ಪ್ರಾ 9–30 ಪ್ರಾ 10–30 |
| *ಆರ್ಜಿತ ಕಲ್ಯಾಣೋತ್ಸವ | | ಪ್ರಾ 10–30 ಮ 12–00 |
| ಸರ್ವದರ್ಶನ | ಪ್ರಾ 10–30 ಸಂ 6–30 | ಪ್ರಾ 10–30 ಸಂ 6–30 |
| ರಾತ್ರಿ ಕೈಂಕರ್ಯ | | |
| ರಾತ್ರಿ ಗಂಟೆ | ಸಂ 6–30 ರಾ 7–00 | ಸಂ 6–30 ರಾ 7–00 |
| ಸರ್ವದರ್ಶನ | ರಾ 7–00 ರಾ 8–45 | ರಾ 7–00 ರಾ 8–45 |
| ಏಕಾಂತ ಸೇವೆ | ರಾ 8–45 ರಾ 9–00 | ರಾ 8–45 ರಾ 9–00 |

| | |
|---|---|
| *ಆರ್ಜಿತ ಕಲ್ಯಾಣೋತ್ಸವ ಶುಲ್ಕ | ರೂ – 150=00 |
| *ಅಭಿಷೇಕ (ಶುಕ್ರವಾರಗಳಲ್ಲಿ) ಶುಲ್ಕ | ರೂ – 100=00 |
| ಅರ್ಚನೆ | ರೂ – 3=00 |
| ಆರತಿ | ರೂ – 1=00 |
| ತೆಂಗಿನಕಾಯಿ ಪರ್ತನೆ | ರೂ – 0=50 |
| ಅಭಿಷೇಕಾನಂತರ ದರ್ಶನ | ರೂ – 3=00 |

## ಪಂಚಾಂಗ ಶ್ರವಣ :

ಯುಗಾದಿ ಹಬ್ಬದ ಇನ್ನೊ[...] ವೆಂದರೆ ಪಂಚಾಂಗ ಶ್ರವಣ. ಗು[...] ಗಳಲ್ಲಿ ವರ್ಷಫಲವನ್ನು ಕೇಳು[...] ಚಂದ್ರ ದರ್ಶನ ಮಾಡಿ ಪರ[...] ಕೋರುವ ಸಂಪ್ರದಾಯವಿದೆ.

ಸಂವತ್ಸರ ಫಲಂ ಸಂಯುಕ[...]
ಯಃಶ್ರುಣೋತ್ಯೇಕ ಮಾನ[...]
ದದ್ಯುರ್ಮನೋರಥಂ ಸರ್ವ[...]
ದೇವತಾಃ ಫಲಮುತ್ತಮಮ[...]

–ಯಾವನು ಹೊಸವರ್ಷದ [...] ಚೆನ್ನಾಗಿ ಕೇಳುವನೋ ಅವನಿಗೆ [...] ಗಳೂ ಉತ್ತಮ ಫಲವನ್ನು, [...] ವನ್ನು ನೀಡುವರು. ಹೀಗೆಂದು[...] ಶ್ರವಣ ಫಲಶ್ರುತಿಯಿದೆ.

## ಗುಡಿ ಪಾಡ್ಯಮಿ :

ಗುಜರಾತ್, ಮಹಾರಾಷ್ಟ್ರ[...] ಕೊಂಕಣಿ ಜನರಲ್ಲಿ ಯುಗಾದಿ[...] ಪಾಡ್ಯಮಿ ಎಂಬ ಹೆಸರಿನಲ್ಲಿ ಆ[...] ಯುಗಾದಿಯಂದು ಮನೆಗ[...] ಪಾಡ್ಯದ ಗುಡಿ (ಧ್ವಜ) ಕಟ್ಟು[...] ರದ ಗಳದ ತುದಿಗೆ ರೇಶಿಮೆ [...] ಹೊದಿಸಿ ಬೆಳ್ಳಿ ಅಥವಾ [...] ಪಾತ್ರೆಗಳನ್ನು ಬೋರಲು ಹಾ[...] ಈ ಧ್ವಜವನ್ನು 'ಗುಡಿ' ಎಂ[...] ವರು. ಅದರ ಬಗೆಗೆ ಮ[...] ಲ್ಲೊಂದು ಕಥೆ ಇದೆ. ಚೇದಿ ರಾ[...] ವಸುವಿನ ಉಗ್ರ ತಪಸ್ಸಿನಿಂದ, ತನ್ನ ಪದವಿಗೆ ಕುಂದುಂಟ[...] ಭೀತಿಯಿಂದ ಆತನ ತಪೋ[...] ಮಾಡುವ ಸಲುವಾಗಿ [...] ವೈಜಯಂತಿ ಮಾಲೆಯನ್ನು[...] ಕೊಟ್ಟು ಚಿನ್ನದ ಕಲಶವುಳ್ಳ[...] ಪತ್ಯದ ಧ್ವಜವನ್ನು ರಾಜನ ತ[...] ಡುತ್ತಾನೆ. ಇದು ನಡೆದದ್ದು ಚೈ[...] ಪ್ರತಿಪದೆಯಾದ್ದರಿಂದ ಈಗಲೂ[...] ಗುಡಿಯನ್ನು ನಿಲ್ಲಿಸುವ ಪದ್ಧ[...] ಯಲ್ಲಿದೆ.

ಹೀಗೆ ಯುಗಾದಿ ಸಂಭ[...] ವಾಗಿ ಆಚರಿಸಲ್ಪಡುವುದು [...] ದಾಯಕ.

# ಭಾರತೀಯ ಕ್ಯಾಲೆಂಡರ್‌ನ ಇತಿಹಾಸ

ರತೀಯ ಕ್ಯಾಲೆಂಡರ್ ವಿಶ್ವದ
ೀನ ತಮ ಕ್ಯಾಲೆಂಡರ್ ಮಾತ್ರವಲ್ಲ,
ಸರ್ವಾಧಿಕ ಪರಿಶುದ್ಧ ಮತ್ತು
ರ್ಣ ಕ್ಯಾಲೆಂಡರೂ ಹೌದು.
ಇಡೀ ವಿಶ್ವದ ಕ್ಯಾಲೆಂಡರ್‌ಗಳ
ಾತ ಎಂದು ಗೌರವಿಸಲಾಗಿದೆ. ಈಚೆಗೆ
ಪ್ರಸಿದ್ಧವಾಗಿರುವ ಇಂಗ್ಲೀಷ್
ಗಿ ಭಾರತೀಯ ಕ್ಯಾಲೆಂಡರ್‌ನ
ನಕಲು ಮಾತ್ರ.

ಶ್ವದ ಪ್ರಾಚೀನತಮ ಗ್ರಂಥ ಋಗ್ವೇ
ಕೆಲವು ಋಕ್‌ಗಳನ್ನು ಓದಿದಾಗ,
ೇದಕಾಲದ ಭಾರತೀಯರ ವರ್ಷದ
ಂಗಳು ಹಾಗೂ 360 ದಿವಸಗಳ
ತು 'ಲೀಪ್ ಇಯರ್' (ಅಧಿಕವರ್ಷದ)
ತ್ತು ಎಂಬುದು ತಿಳಿದು ಬರುತ್ತದೆ.

ದ್ವಾದಶಾರಂ ನಹಿ ತಜ್ಜರಾಯ
ವರ್ಷಂತಿ ಚಕ್ರಂ ಪರಿದ್ಯಾಮೃತಸ್ಯ।
ಪುತ್ರಾ ಅಗ್ನೇ ಮಿಥುನಾಸೋ ಅತ್ರ
ಸಪ್ತಶತಾನಿ ವಿಂಶತಿಶ್ಚ ತಸ್ಥು॥
(ಋಗ್ವೇದ ಸಂಹಿತೆ)

ತ್ಮಾತ್ಮಕವಾದ ಆದಿತ್ಯನ ಹನ್ನೆರಡು
ಾಲುಗಳಚಕ್ರವು ದ್ಯುಲೋಕದ ನಾಲ್ಕೂ
ಸತತವಾಗಿ ಸಂಚರಿಸುತ್ತಾ ಇದ್ದರೂ
ನಾಶಹೊಂದುವುದಿಲ್ಲ, ಹೇ ಅಗ್ನಿ, ಈ
ದ ಮೇಲೆ ಯುಗಗಳ 720 ಜೋಡಿ
ಢವಾಗಿರುತ್ತವೆ. ಅಂದರೆ ಸೂರ್ಯ
ನ ರಥದ ಚಕ್ರವೇ ಒಂದು ಪೂರ್ಣ
ರ್ವ. ಮತ್ತು ಅವನ ಹನ್ನೆರಡು ಅರೆ
(ಪಟ್ಟಿಗಳೇ) ಹನ್ನೆರಡು ತಿಂಗಳುಗಳು,
ದೆ 720 ಜೋಡಿಗಳು, 360 ಹಗಲು
ತ್ತು 360 ರಾತ್ರಿಗಳು, ಈ ರೀತಿ ಪೂರ್ಣ
ರ್ವವಾಗುತ್ತದೆ.

'ಅಧಿಕವರ್ಷ' ಮತ್ತು 'ಅಧಿಕಮಾಸ'ದ
ರನೆ ಋಗ್ವೇದ ಕೆಳಗಿನ ಋಕ್‌ನಲ್ಲಿದೆ-

'ವೇದಮಾಸೋ ಧೃತವ್ರತೋ ದ್ವಾದಶ
ಪ್ರಜಾವತಃ। ವೇದಾಯ ಉಪಜಾಯತೆ'
(ಋಗ್ವೇದ)

ಧೃತವ್ರತ (ವರುಣ) ಹನ್ನೆರಡು ತಿಂಗಳು ಮತ್ತು ಅವುಗಳಿಂದ ಹುಟ್ಟುವ ಪ್ರಾಣಿಗಳನ್ನು ತಿಳಿಸುತ್ತದೆ. ಅದು ಅಧಿಕ ಮಾಸವನ್ನೂ ತಿಳಿಸುತ್ತದೆ.

ಈ ಅಧಿಕ-ಮಾಸ ಅಗಿನಿಂದ ಇಂದಿನವರೆಗೆ ಭಾರತೀಯ ಕ್ಯಾಲೆಂಡರ್‌ನ ಒಂದು ಅಂಗವಾಗಿದೆ. ಅದನ್ನು ಆಧುನಿಕ ಸಂಶೋಧನೆ ಎಂದು ಹೇಳುವುದು ಒಂದು ತಪ್ಪು.

ವೈದಿಕ ಮಾಸಗಳ ಹೆಸರುಗಳಿಗೆ ಋತುಗಳೇ ಆಧಾರವಾಗಿದ್ದುವು. ಇವುಗಳ ಆಧಾರದ ಮೇಲೆಯೇ ಹನ್ನೆರಡು ತಿಂಗಳುಗಳ ಹೆಸರು ಇಡಲ್ಪಟ್ಟಿದ್ದವು. ಮತ್ತೆ ಪ್ರತಿ ಎರಡೆರಡು ತಿಂಗಳುಗಳ ಮಧುವಿನಿಂದ ಆರು ಭಾಗಗಳಾಗಿ ಹಂಚಿದಾಗ ವಸಂತ, ಗ್ರೀಷ್ಮ, ವರ್ಷಾ, ಶರದ್, ಹೇಮಂತ ಮತ್ತು ಶಿಶಿರಗಳಾದವು. ವೇದಗಳಲ್ಲಿ ಅಂತೆಯೇ, ಹಲವು ಸ್ಥಳಗಳಲ್ಲಿ ಹನ್ನೆರಡು ತಿಂಗಳುಗಳ ಉಳಿದ ಹೆಸರುಗಳು ವರ್ಣಿತವಾಗಿವೆ.

ಭಾರತೀಯ ತಿಂಗಳುಗಳ ಆಧುನಿಕ ಹೆಸರುಗಳೆಂದರೆ; ಚೈತ್ರ, ವೈಶಾಖ, ಜ್ಯೇಷ್ಠ, ಆಷಾಢ, ಶ್ರಾವಣ ಭಾದ್ರಪದ, ಆಶ್ವೀಜ, ಕಾರ್ತೀಕ. ಮಾರ್ಗಶೀರ್ಷ, ಪುಷ್ಯ, ಮಾಘ, ಮತ್ತು ಫಾಲ್ಗುಣ. ಮುಂದೆ ಜ್ಯೋತಿಶ್ಶಾಸ್ತ್ರ ಸಾಕಷ್ಟು ವಿಕಾಸಗೊಂಡ ಮೇಲೆ ನಕ್ಷತ್ರಗಳ ಆಧಾರದಮೇಲೆಯೇ ಹೆಸರುಗಳು ಇಡಲ್ಪಟ್ಟವು.

ವೈದಿಕ ಖಗೋಳಜ್ಞರು ಖಗೋಳವನ್ನು 27 ಭಾಗಗಳಲ್ಲಿ ವಿಭಜಿಸಿ ಅವುಗಳಿಗೆ 27 ಚಂದ್ರ ನಕ್ಷತ್ರಗಳ ಸಂಖ್ಯೆಯನ್ನು

ಶ್ರೀ ಮೂರ್ತಿ ರಾಮನಾಥಪುರ

ಕೊಟ್ಟರು. ಏಕೆಂದರೆ ಪ್ರತಿಯೊಂದು ಭ
ವನ್ನು ಚಂದ್ರನ ಮಾರ್ಗದಿಂದಲೇ
ಭಾಗಗಳಾಗಿ ಹಂಚಿ ಮಾಡಲ್ಪಟ್ಟಿತ್ತು. ಪ
ಯೊಂದು ಖಂಡ 2¼ ಭಾಗಗಳನ್ನು ಜೋ
ಅವುಗಳನ್ನು ರಾಶಿಗಳಾಗಿ ತಿಳಿಯಲಾಯಿ
ಹೀಗೆ, ಅವರಿಂದ ಅಂತರಿಕ್ಷದಲ್ಲಿ 27 ಚಾ
ನಕ್ಷತ್ರ ಹಾಗೂ 12 ರಾಶಿಗಳ ಕ
ಮತ್ತೂ ಮಾಡಲ್ಪಟ್ಟಿತು. ಪ್ರತಿಯೊ
ರಾಶಿಯಲ್ಲಿ 30 ಅಂಶ, ಮತ್ತು ಪ್ರತಿಯೊ
ನಕ್ಷತ್ರದಲ್ಲಿ 13 ಅಂಶ ಮತ್ತು 10 ಕ
ಗಳ ಪ್ರಮಾಣದಿಂದ ಚಾಂದ್ರಮಾರ್ಗವ
360 ಅಂಶಗಳಲ್ಲಿ (ದಿನಗಳಲ್ಲಿ) ವಿಭಜಿ
ಯಿತು.

ಮಾಸಗಳ ಹೆಸರಿಗೆ ವೈದಿಕ ಜ್ಯೋ
ಜ್ಞರು ನಕ್ಷತ್ರಗಳನ್ನು ಆಧಾರವಾಗಿ
ಕೊಂಡರು. ಇದು ಅವರಿಗೆ ಪೂರ್ಣಿಮ
ಕಡೆಯ ಹಂತದಲ್ಲಿ ಕಾಣುತ್ತಿತ್ತು. ಪೂ
ಮೆಯು ಚಿತ್ರಾ ನಕ್ಷತ್ರದ ಬಳಿಯಿದ್ದ
ಆ ತಿಂಗಳನ್ನು ಚೈತ್ರವೆಂದರು. ಕ
ಯಿಂದ ಕಾರ್ತೀಕ, ಮುಂತಾದವು.

ಚಂದ್ರ ತನ್ನ ಮಾರ್ಗದಿಂದ
ವರ್ಷವೂ 11 ಅಂಶಗಳು (ಹಿಂಜರಿ)
ಸರಿಯುತ್ತಾನೆಂದು ಅಧ್ಯಯನದಿಂದ
ಖಗೋಲಶಾಸ್ತ್ರಜ್ಞರು ತಿಳಿದಿದ್ದಾರೆ
ರಿಂದಲೇ ಚಾಂದ್ರಮಾಸದ ಋತುಗಳ
ಸಮಾನ ಸಂಬಂಧವಿಡುವ ಉದ್ದೇ
ಅವರು ಪ್ರತಿ ಮೂರು ಚಾಂದ್ರ
ಕಳೆದು ಹೋದಾಗ (ಮುಗಿದಾಗ),
ಅಧಿಕ ಚಾಂದ್ರಮಾಸವನ್ನು ಅದರ
ಸುವ ವ್ಯವಸ್ಥೆ ಮಾಡಿದ್ದಾರೆ. ಇದರ
ಸೌರವರ್ಷದ ಬಗ್ಗೆ ತಾರತಮ್ಯ
ಯಿತು. ಸೌರವರ್ಷದ ಮಾಸ (ತಿ
ಗಳ_ಹೆಸರು ರಾಶಿಗಳ ಹೆಸರಿನಿಂದ
ವಾಗಿವೆ. ಉದಾ:-ಕುಂಭ

# ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ,

## ತಿರುಚಾನೂರು

ಅಲಮೇಲು ಮಂಗಾಪುರವೆಂದು ಹೆಸರಾದ ಈ ಊರು ತಿರುಪತಿಯಿಂದ ನಾಲ್ಕು ಮೈಲು ದೂರದಲ್ಲಿದೆ. ತಿರುಮಲೆಯ ದರ್ಶನವಾದ ಮೇಲೆ ಈ ಊರನ್ನು ದರ್ಶಿಸಿ ಪೂರ್ಣಕಾಮರಾಗುವುದು ಪರಂಪರೆ.

## ಆಲಯ ಕಾರ್ಯಕ್ರಮ.

| | ಶುಕ್ರವಾರಗಳಲ್ಲಿ | ಇತರ ದಿನಗಳಲ್ಲಿ |
|---|---|---|
| ಸುಪ್ರಭಾತ | ಬೆಳಗ್ಗೆ 4–00 ರಿಂದ 4–30 | ಬೆಳಗ್ಗೆ 5–00 ರಿಂದ 5–30 |
| ಸಹಸ್ರನಾಮಾರ್ಚನೆ | ,, 4–30 ರಿಂದ 5–00 | ,, 5–30 ರಿಂದ 6–00 |
| (ರೂ 6–00 ಶುಲ್ಕದಿಂದ 4 ಮಂದಿಗೆ ಅನುಮತಿ) | | |
| ಶುದ್ಧಿ, 1ನೇ ಗಂಟೆ | ಬೆಳಗ್ಗೆ 5–15 ರಿಂದ 5–45 | ಬೆಳಗ್ಗೆ 6–00 ರಿಂದ 6–30 |
| ಸರ್ವದರ್ಶನ | ,, 5–45 ರಿಂದ 7–00 | ,, 6–30 ರಿಂದ 11–30 |
| ಸಳ್ಳಿಂಪು | ,, 7–00 ರಿಂದ 7–30 | |
| ಅಭಿಷೇಕ | ,, 9–00 ರಿಂದ 10–00 | |
| ( ರೂ 100/- ಶುಲ್ಕದಿಂದ ಒಬ್ಬರಿಗೆ ಅನುಮತಿ ) | | |
| (ಅಭಿಷೇಕಾನಂತರ ದರ್ಶನ ಒಬ್ಬರಿಗೆ ರೂ 2/-ಶುಲ್ಕ) | | |
| ಅಲಂಕಾರ 2ನೇ ಗಂಟೆ | 10–00 ರಿಂದ 11–00 | ಮಧ್ಯಾಹ್ನ 11–30 ರಿಂದ 12–00 |
| ಸರ್ವದರ್ಶನ | 11–00 ರಿಂದ ರಾತ್ರಿ 8–00 | 12–30 ರಿಂದ 6–00 |
| ಊಂಜಲ್ ಸೇವೆ (ಮುಕುರ ಮಂಟಪದಲ್ಲಿ) | ರಾತ್ರಿ 7–00 ರಿಂದ 8–00 (ಶುಲ್ಕ ರೂ 150/-) | — |
| ರಾತ್ರಿ ಗಂಟೆ | ರಾತ್ರಿ 8–00 ರಿಂದ 8–30 | ರಾತ್ರಿ 6–00 ರಿಂದ 6–30 |
| ಸರ್ವದರ್ಶನ | — | ,, 6–30 ರಿಂದ 9–15 |
| ಏಕಾಂತಸೇವೆ | ,, 8–30 ರಿಂದ 9–00 | ,, 9–15 ರಿಂದ 9–30 |

ಪೇಷ್ಕಾರ್.

ಮೋಕ್ಷ ಮಾಸಮ್–ಇತ್ಯಾದಿ ಸೌ
ಮೊದಲ ದಿನವನ್ನೇ ಸಂಕ್ರಾಂತಿ
ತ್ತೇವೆ. ಮತ್ತೆ ಸೂರ್ಯ ಮತ್ತು
ನಡುವೆ 12 ಅಂಶಗಳ ಅಂತರದ
ತಿಥಿ ಎನ್ನುತ್ತಾರೆ.

ವೈದಿಕ ಕಾಲದಲ್ಲಿ ಸಾಯನ
ಮೂಲಕ ಸೌರವರ್ಷದ ಗಣನೆ
ದ್ದರು. ಮತ್ತು ಇದೇ ಪದ್ಧತಿಗೆ
ವಾಗಿ ಭಾರತದ ಹೊಸವರ್ಷ 22
ಆರಂಭವಾಗುತ್ತದೆ. ಅಂದು
ಸಾಯನ ಮೇಷ ರಾಶಿಗೆ ಪ್ರವ
ತ್ತಾನೆ. ಸಾಯನ ಹಾಗೂ ನಿರಯ
ಪದ್ಧತಿಗಳು ಪ್ರಸಿದ್ಧವಾಗಿವೆ.

ಪ್ರಾಚೀನ ರೋಂನ ವಾಸಿಗಳ
ಪದ್ಧತಿಯನ್ನು ತಮ್ಮದಾಗಿಸಿ
ರೋಂ ನಗರದ ಸ್ಥಾಪನೆಯನ್ನು
ಸನ್ 753 ಕ್ಕೇ ಮತ್ತೊಂದು ಹೆ
ತ್ಸರ ದೊಂದಿಗೆ ಮಾಡಿದರು.
ಸೃಷ್ಟಿ ಸಂವತ್ಸರ, ಕಲಿಸಂವತ್ಸ
ಷ್ಮರ ಸಂವತ್ಸರ, ಬೌದ್ಧ
ಹಾಗೂ ಶಕ ಸಂವತ್ಸರ ಮುಂತ
ದ್ಧವಾಗಿದೆ. ಆದರೆ ಎಲ್ಲಕ್ಕಿಂತ
ವಾದದ್ದು, " ಕ್ರಿಸ್ತಸ
ವ್ಯವಹಾರ ಬಳಕೆಯಲ್ಲಿ ಇದು
ಆಕ್ರಮಿಸಿದೆ. ಇಸ್ಲಾಮ್
ನಮ್ಮ ದೇಶದಲ್ಲೂ ಹೆಚ್ಚು
ಲ್ಲಿದೆ.



# ಮುಕುಂದ ಮಾಲಾಸ್ತೋತ್ರ

ುಕುಂದ ಮಾಲಾ ಸ್ತೋತ್ರವು ರತ್ನ ಪ್ರಾಯ ನಲವತ್ತು ಶ್ಲೋಕಗಳನ್ನೊಳಗೊಂಡಿದೆ. ಂದು ಶ್ಲೋಕವೂ ಸೊಗಸಾಗಿವೆ. ಅರ್ಥ ವಾಗಿವೆ. ರಹಸ್ಯಾರ್ಥಗಳನ್ನೊಳಗೊಂಡಿವೆ ಗಳಂತೂ ಅತಿಸುಂದರ. ಸುಲಭ ಮತ್ತು ಒಂದೊಂದು ಶ್ಲೋಕವೂ, ಉತ್ತಮ ಂತೆ, ಪರಮಾತ್ಮನ ಮಹಿಮೆಯನ್ನು ಕಪಡಿಸುವುದರಲ್ಲಿ ಸ್ಪರ್ಧಿಸುತ್ತಿದೆಯೋ ವಂತಿವೆ ಪ್ರಾರ್ಥನಾರೂಪವಾದ ಇಂತಹ ೋತ್ರಮರತ್ನಹಾರವನ್ನು ಕುಲಶೇಖರ ಆಳ್ವಾ ಮುಕುಂದನಿಗೆ ಅರ್ಪಿಸಿದ್ದಾರೆ. ಜನ್ಮಸಾಫಲ್ಯ ವ. ಸಂಜೀವನಪ್ರಾಯವಾದ ಮತ್ತು ಷ ರಸಾಯನ ರೂಪವಾದ ಈ ಸ್ತೋತ್ರ ನ್ನು ಆಳ್ವಾರರು ರಚಿಸಿ, ಪ್ರಾರ್ಥಿಸಿ, ಪರ ತ್ಮ ಸಾಕ್ಷಾತ್ಕಾರ ಪಡೆದು, ಇತರರೂ ಯೇ ಮಾಡಲಿ ಎಂದು ಈ ಸ್ತೋತ್ರವನ್ನು ಸಿದ್ದಾರೆ.

ುಲಶೇಖರರು ಕೇರಳದೇಶದ ದೊರೆಗಳು. ವೈರಾಗ್ಯ ಸಂಪನ್ನರು, ಪರಮಾತ್ಮನ ್ತಿ ಭ ಅಂತ ಸಂಭೂತರು, ಐಹಿಕ ಸುಖಾದಿ ಬಹು ವಿರಕ್ತವಾಗಿ ಜನ್ಮ ಪ್ರಭೃತಿ ಭಕ್ತಿ, ನ, ವೈರಾಗ್ಯನಿಷ್ಠರಾಗಿ, ಸದಾ ಭಗವಂತನ ಕರ್ಯದಲ್ಲಿ ನಿರತರಾಗಿದ್ದರು. ರಾಮಾಯಣ ಾಭಾರತಗಳನ್ನು ಆಳವಾಗಿ ಅಭ್ಯಾಸ ಡಿದ್ದರು. ಸದಾ ಪರಮಾತ್ಮನ ಚಿಂತನೆಯಲ್ಲಿ ದರಿಂದ ಇವರು ಪರಮ ಭಕ್ತರಾದರು. ಕ ಗುರುವಾದ ಶ್ರೀಕೃಷ್ಣ ಪರಮಾತ್ಮನ ರ್ಥನಾರೂಪವಾಗಿ ಮುಕುಂದಮಾಲಾ ೋತ್ರವನ್ನು ರಚಿಸಿ ಮುಕುಂದನಿಗೆ ಅರ್ಪಿಸಿ ಾರ್ಥರಾದರು. ಇದೊಂದು ಸ್ತುತಿ ರತ್ನ. ಗ್ರಾಹ್ಯವಾಗಿದೆ. ಸರ್ವಾದರಣೀಯವಾಗಿದೆ. ರೂ ಇದನ್ನು ಪಠಿಸಿ, ಪ್ರಾರ್ಥಿಸಿ, ಉಜ್ಜೀವಿ ಮತ್ತು ಪರಮಾತ್ಮನ ಕೃಪೆಗೆ ಪಾತ್ರರಾಗಲಿ ಬ ಉದ್ದೇಶದಿಂದ ಆಳ್ವಾರರು ಈ ಸ್ತೋತ್ರ ು, ಕರುಣಿಸಿದ್ದಾರೆ ಈ ಸ್ತೋತ್ರದ ಕೆಲವು ್ಲೋಕಗಳನ್ನು ಮಾತ್ರ ಈ ಲೇಖನದಲ್ಲಿ ವಿವ ಲು ಪ್ರಯತ್ನಿಸಲಾಗಿದೆ.

ಗ್ರಂಥದ ಪ್ರಾರಂಭದಲ್ಲಿ ಆಳ್ವಾರರು ಪರಮಾ ನನ್ನು ಕುರಿತು ಮಂಗಳಾಶಾಸನ ಮಾಡಿದ್ದಾರೆ.

ಶ್ರೀವಲ್ಲಭೇತಿ ವರದೇತಿ ದಯಾಪರೇತಿ
ಭಕ್ತಪ್ರಿಯೇತಿ ಭವಲುಂಠನ ಕೋವಿದೇತಿ
ನಾಥೇತಿ ನಾಗಶಯನೇತಿ ಜಗನ್ನಿವಾಸೇ
ತ್ಯಾಲಾಪನಂ ಪ್ರತಿಪದಂ ಕುರು ಮೇ
ಮುಕುಂದ

ಹೇ! ಮುಕುಂದ! ನೀನು ಲಕ್ಷ್ಮೀರಮಣನು, ಇಷ್ಟಾರ್ಥವನ್ನು ಕೊಡುವವನು, ಶರಣಾಗತ ವಾದವರಿಗೆ ಕರುಣೆಯಿಂದ ಅಭಯ ಕೊಡುವವನು. ನಿನ್ನ ಪಾದಕಮಲಗಳನ್ನು ಆಶ್ರಯಿಸಿದ ಕಿಂಕರ ರಲ್ಲಿ ಬಹುವಿಶ್ವಾಸವುಳ್ಳವನು. ಅಪಾರವಾದ ಸಂಸಾರಬಂಧನವನ್ನು ಬಿಡಿಸಿ ಪುರುಷಾರ್ಥ ಕೊಡುವುದರಲ್ಲಿ ಸಮರ್ಥನು. ಅಖಿಲಾಂಡಕೋಟಿ ಬ್ರಹ್ಮಾಂಡ ನಾಯಕನು, ಆದಿಶೇಷನನ್ನು ಪರ್ಯಂಕವಾಗಿ ಹೊಂದಿರುವವನು. ಇಂತಹ ಮಹಿ ಮೆಯುಳ್ಳ ನಿನ್ನ ದಿವ್ಯ ನಾಮಗಳನ್ನು ಸದಾ ಧ್ಯಾನಿಸಿ ಉಚ್ಚರಿಸಿ, ಪಾಪ ಪರಿಹಾರ ಮಾಡಿ ಕೊಳ್ಳುವ ಭಾಗ್ಯವನ್ನು ಅನುಗ್ರಹಿಸು.

ಗೀತಾವಾಕ್ಯಗಳಾದ "ಸಮೋಽಹಂ ಸರ್ವ ಭೂತೇಷು ನಮೇ ದ್ವೇಷ್ಯೋಸ್ತಿ ನ ಪ್ರಿಯಃ" ಎಂಬ ರಹಸ್ಯಾರ್ಥವನ್ನು ಇಲ್ಲಿ ಅಳವಡಿಸಲಾಗಿದೆ. 'ಹೇ ಸ್ವಾಮಿ, ಮುಕುಂದಾ, ನೀನು ಸರ್ವಶ್ರೇಷ್ಠನು ಭಕ್ತಿಯೋಗವನ್ನು ಮೆಚ್ಚುವವನು. ಕುಲಗೋತ್ರ ಗಳನ್ನು ಗಮನಿಸುವವನಲ್ಲ. ವಿಭೀಷಣನೂ, ಪ್ರಹ್ಲಾದನೂ ಭಕ್ತಿಯಿಂದ ನಿನ್ನನ್ನು ಆಶ್ರಯಿಸಿ ನಿನ್ನಿಂದ ರಕ್ಷಿಸಲ್ಪಟ್ಟರು. ವಾಲಿ, ರಾವಣ, ಹಿರಣ್ಯಕಶಿಪು. ಹಿರಣ್ಯಾಕ್ಷ, ಇತ್ಯಾದಿಗಳು ನಿನ್ನನ್ನು ದ್ವೇಷಿಸಿ, ನಿನ್ನ ಆಗ್ರಹಕ್ಕೆ ಪಾತ್ರರಾಗಿ ಮುಕ್ತಿ ಹೊಂದಿದರು. ಪರಮಾತ್ಮನು ಶತ್ರು ನಿಗ್ರಹಕ್ಕಾಗಿ ಚಕ್ರಾಯುಧವನ್ನೂ, ಜ್ಞಾನೋಪ ದೇಶಕ್ಕಾಗಿ ಶಂಖವನ್ನೂ, ಧರ್ಮರಕ್ಷಣೆಗಾಗಿ ಗದೆ ಯನ್ನೂ, ಧರಿಸಿ ಭಕ್ತರನ್ನು ಕಾಪಾಡುವುದಕ್ಕಾಗಿ ಲಕ್ಷ್ಮೀದೇವಿಯನ್ನು ವಕ್ಷಸ್ಥಳದಲ್ಲಿಯೇ ಇಟ್ಟುಕೊಂ ಡಿರುವನು. ತನ್ನನ್ನು ರಕ್ಷಿಸುವವರು ಪರಮಾತ್ಮ ಸ್ವರೂಪನಾದ ಶ್ರೀಕೃಷ್ಣನಲ್ಲದೆ ಮತ್ಯಾರೂ ಇಲ್ಲ ಎಂದು ಭಕ್ತಿಯಿಂದ ಪ್ರಾರ್ಥಿಸಿದರೆ ರಕ್ಷಿಸಿಯೇ ರಕ್ಷಿಸುವನು-ಎಂಬ ಗೀತಾ ರಹಸ್ಯಾರ್ಥವನ್ನು ಇಲ್ಲಿ ಅಳವಡಿಸಲಾಗಿದೆ.

ಜಯತು ಜಯತು ದೇವೋ
ದೇವಕೀ ನಂದ ನೋಯಂ।
ಜಯತು ಜಯತು ಕೃಷ್ಣೋ
ವೃಷ್ಣಿ ವಂಶಪ್ರದೀಪಃ।
ಜಯತು ಜಯತು
ಮೇಘ ಶ್ಯಾಮಲಃ ಕೋಮಲಾಂಗೋ।
ಜಯತು ಜಯತು
ಪೃಥ್ವೀಭಾರ ನಾಶೋ ಮುಕುಂದಃ ॥

ಶ್ರೀ ಡಿ. ಕೃಷ್ಣೈಂಗಾರ್

ದೇವಕೀಪುತ್ರನಾದ ದೇವದೇವನು ಜಯ ನಾಗಿರಲಿ. ಯದುವಂಶ ಪ್ರಕಾಶಕ ಶ್ರೀಕೃಷ್ಣನು ಜಯಶೀಲನಾಗಿರಲಿ. ನೀಲ ಶ್ಯಾಮನಾಗಿ ಮನೋಹರ ದೇಹವುಳ್ಳ ವಿ ಜಯಶೀಲನಾಗಿರಲಿ. ಭೂಮಿಗೆ ಭಾರವಾದ ರನ್ನು ನಿಗ್ರಹಿಸಿ, ಶಿಷ್ಟರಿಗೆ ಮೋಕ್ಷಕೊ ಮುಕುಂದನು ಜಯಶೀಲನಾಗಿರಲಿ. ಶ್ಲೋ ಬಹು ಸುಲಭವೂ ಸರಳವೂ ಆಗಿದೆ. "ಸಮೋ ಸರ್ವಭೂತೇಷು ನಮೇ ದ್ವೇಷ್ಯೋಸ್ತಿ, ನ ಪ್ರಿ "ತೇಷಾಂ ಜ್ಞಾನೀ ನಿತ್ಯಯುಕ್ತಃ ಏ ವಿಶಿಷ್ಯತೇ" "ಪರಿತ್ರಾಣಾಯ ಸಾಧೂ ವಿನಾಶಾಯ ಚ ದುಷ್ಕೃತಾಂ" ಎಂಬ ಗೀತಾ ಗಳ ಅರ್ಥವನ್ನು ಇಲ್ಲಿ ಗರ್ಭೀಕರಿಸಲಾಗಿದೆ

ಮಾನವರು ತಮ್ಮ ಇಂದ್ರಿಯಗಳನ್ನು ತ್ಮನ ಕೈಂಕರ್ಯದಲ್ಲಿ ಉಪಯೋಗಿಸಬೇ ಆಳ್ವಾರರು ತಿಳಿಸಿದ್ದಾರೆ. ಇದು ಉಪದೇ ವಾಗಿಯೂ, ಬೋಧಪ್ರದವಾಗಿಯೂ ನಾವು ಮಾಡುವುದನ್ನೆಲ್ಲ ಪರಮಾತ್ಮ ಪ್ರೀ ಮಾಡಬೇಕೆಂಬುದು ಅವರ ಅಭಿಪ್ರಾಯ,

ಜಿಹ್ವೇ ಕೀರ್ತಯ ಕೇಶವಂ
ಮುರರಿಪುಂ ಚೇತೋ ಭಜ ಶ್ರೀಧರಂ
ಪಾಣಿದ್ವಂದ್ವ ಸಮರ್ಚಯಾ
ಚ್ಯುತಕಥಾ ಶ್ರೋತ್ರದ್ವಯ ತ್ವಂ ಶೃ
ಕೃಷ್ಣಂ ಲೋಕಯ ಲೋಚನದ್ವಯ
ಹರೇ ರ್ಗಚ್ಛಾಂಘ್ರಿ ಯುಗ್ಮಾಲಯಂ
ಜಿಘ್ರ ಘ್ರಾಣ ಮುಕುಂದಪಾದ ತುಲ
ಮೂರ ನ್ನ ಮಾಧೋಕ್ಷಜಂ ॥

ಹೇ! ನಾಲಗೆಯೇ! ದುಷ್ಟನಿಗ್ರಹಮಾ ರನ್ನು ರಕ್ಷಿಸಿದ ಶ್ರೀಕೃಷ್ಣನಾಮವನ್ನು ಸುತ್ತಿರು ಹೇ ಮನಸ್ಸೇ! ಮುರಾ ಸಂಹರಿಸಿದ ಸ್ವಾಮಿಯನ್ನು ಸದಾ ಹೇ! ಕೈಗಳೇ! ಲಕ್ಷ್ಮೀಪತಿಯ ಆರಾ ನಿರತರಾಗಿರಿ. ಕಿವಿಗಳೇ! ಹರಿಕಥಾಶ್ರವ ಆನಂದಪಡಿ. ಹೇ! ಕಣ್ಣುಗಳೇ, ಶ್ರೀ ದಿವ್ಯಮಂಗಳಮೂರ್ತಿಯ ದರ್ಶನಮಾ ಪಾದಗಳೇ ದೇವಾಲಯಗಳಿಗೆ ಹೋಗಿ ನನ್ನು ಪೂಜಿಸಿ. ಹೇ! ನಾಸಿಕವೇ ಪ ನನ್ನು ಪೂಜಿಸಿದ ತುಲಸಿಯನ್ನು ಆಘ ಎಲ್ಯ! ಮನಸ್ಸೇ ಪರಮಾತ್ಮ ಸ್ವರ ಶ್ರೀಕೃಷ್ಣನ ಪಾದಕಮಲಗಳಿಗೆ ನಮಸಾ ಧನ್ಯನಾಗು. ಹೀಗೆ ಪರಮಾತ್ಮ ಕೈ

ನಮ್ಮ ಇಂದ್ರಿಯಗಳನ್ನು ವಿನಿಯೋಗಿಸಬೇಕೆಂದು ಆಳ್ವಾರರು ಬೋಧಿಸಿದ್ದಾರೆ.

“ಅಯ್ಯಾ! ಮಾನವ ಬಂಧುಗಳೇ, ಹುಟ್ಟು ಸಾವು ಎಂಬ ರೋಗಕ್ಕೆ ಋಷಿಗಳು ಹೇಳಿರುವ ಔಷಧಿಯನ್ನು ಕೇಳಿ, ಸಮಸ್ತ ಪ್ರಾಣಿಗಳ ಹೃದಯದಲ್ಲಿ ಅಂತರ್ಜ್ಯೋತಿ ಸ್ವರೂಪನೂ, ಅಪ್ರಮೇಯನೂ, ಆದಿಮಧ್ಯಾಂತ ರಹಿತನೂ, ದಿವ್ಯ ಮಂಗಳ ವಿಗ್ರಹಯುಕ್ತನೂ, ಆದ ಶ್ರೀಕೃಷ್ಣನ ನಾಮಾಮೃತವನ್ನು ಪಾನಮಾಡಿ. ಇದರಿಂದ ನಿಮಗೆ ಶಾಶ್ವತ ಸುಖ ದೊರೆಯುವುದು” ಎಂದಿದ್ದಾರೆ ಆಳ್ವಾರವರು. ಹಾಗೆಯೇ ನಮೋ ನಾರಾಯಣ ಎಂಬ ಮಹಾಮಂತ್ರವನ್ನು ಜಪ ಮಾಡಿ ಸಿದ್ಧಿ ಪಡೆಯಬೇಕೆಂದು ಅವರು ಎಚ್ಚರಿಸಿದ್ದಾರೆ.

ಪರಮಾತ್ಮನ ದಿವ್ಯ ನಾಮಗಳನ್ನು ಎಷ್ಟು ಸಾರಿ ಹೇಳಿದರೂ ಕುಲಶೇಖರರಿಗೆ ತೃಪ್ತಿಯೇ ಇಲ್ಲ. ತಾವು ಕೇಳಿದಂತೆ ಇತರರೂ ಹೇಳಿ ಕೃತಾರ್ಥರಾಗಲಿ ಎಂಬುದು ಅವರ ಅಭಿಪ್ರಾಯವಾಗಿದೆ.

ಹೇ! ಗೋಪಾಲಕ, ಹೇ ಕೃಪಾಜಲನಿಧೇ,
ಹೇ! ಸಿಂಧುಕನ್ಯಾಪತೇ, ಹೇ ಕಂಸಾಂತಕ!
ಹೇ! ಗಜೇಂದ್ರ ಕರುಣಾ ಪಾರೀಣ
ಹೇ ಮಾಧವ! ಹೇ ರಾಮಾನುಜ!
ಹೇ ಜಗತ್ರಯ ಗುರೋ
ಹೇ ಪುಂಡರೀಕಾಕ್ಷ ಮಾಂ,
ಹೇ ಗೋಪೀಜನ ನಾಥ ಪಾಲಯ
ಪರಂ ಜಾನಾಮಿ ನ ತ್ವಾಂ ವಿನಾ ॥

ಗೋವುಗಳನ್ನು ಸಲಹಿದ ಸ್ವಾಮಿಯೇ, ದಯಾಸಾಗರನೇ, ಲಕ್ಷ್ಮೀಪತಿಯೇ, ಲೋಕಕಂಟಕನಾದ ಕಂಸನನ್ನು ಸಂಹರಿಸಿ ಶಿಷ್ಯನನ್ನು ರಕ್ಷಿಸಿದ ಸ್ವಾಮಿಯೇ, ಆರ್ತನಾದ ಗಜರಾಜನನ್ನು ಪೊರೆದ ದಯಾಮೂರ್ತಿಯೇ, ಕ್ಷೀರಸಾಗರ ಕನ್ನಿಕೆಯನ್ನು ವಿವಾಹವಾದ ಸ್ವಾಮಿಯೇ, ಶೂರನಾದ ಬಲರಾಮನ ಸಹೋದರನೇ, ಮೂರು ಲೋಕಕ್ಕೂ ಸುಜ್ಞಾನವನ್ನು ಬೋಧಿಸಿದ ಜಗದ್ಗುರುವೇ, ಕಮಲದಂತೆ ಕಣ್ಣುಳ್ಳವನೇ, ಗೋಪೀಜನರ ಒಡೆಯನೇ, ನಮ್ಮನ್ನು ರಕ್ಷಿಸಲು ನಿನ್ನನ್ನು ಬಿಟ್ಟರೆ ಇನ್ನಾರೂ ಗತಿಯಿಲ್ಲ.

“ಉತ್ತಮಃಪುರುಷ ಸ್ತ್ವನ್ಯಃ ಪರಮಾ
ತ್ಮೇತ್ಯುದಾಹೃತಃ”
“ಮತ್ತಃ ಪರತರಂ ನಾಸ್ತಿ ಕಿಂಚಿದಸ್ತಿ
ಧನಂಜಯ”
“ಕಾರ್ಪಣ್ಯದೋಷೋಪಹತಸ್ವಭಾವಃ
ಪೃಚ್ಛಾಮಿತ್ವಾಂ ಧರ್ಮ ಸಂಮೂಢಚೇತಾಃ”

ಎಂಬ ಗೀತಾವಾಕ್ಯ ರಹಸ್ಯಾರ್ಥಗಳನ್ನು ಇಲ್ಲಿ ಗರ್ಭೀಕರಿಸಲಾಗಿದೆ.

ಪರಮಾತ್ಮನಿಗೆ ಸಹಸ್ರಾರು ನಾಮಗಳಿವೆ ಅವನ ಪ್ರತಿಯೊಂದು ದಿವ್ಯನಾಮವೂ ಒಂದೊಂದು ಮಂತ್ರದಂತೆ ‘ಮಂತ್ರಂ ಯತ್ನೇನ ಗೋಪಯೇತ್’ ಎಂಬಂತೆ ಇವನ್ನು ನಿತ್ಯವೂ ಜಪ ಮಾಡುತ್ತಿರಬೇಕು. ಇಂತಹ ಮಂತ್ರಗಳ ಮಹಿಮೆಯನ್ನು ಆಳ್ವಾರರು ಹೀಗೆ ವರ್ಣಿಸಿದ್ದಾರೆ.

ಅರಿಷಡ್ವರ್ಗ ರೂಪದಲ್ಲಿ ನಮಗೆ ನಿತ್ಯವೂ ಅಹಿತವನ್ನು ನಾಶಮಾಡಲು ಪರಮಾತ್ಮನ ದಿವ್ಯ ನಾಮವು ಮುಖ್ಯ ಮಂತ್ರವಾಗಿದೆ. ಅಖಿಲ ವೇದ ಸಾರವಾದ ಉಪನಿಷದ್ವಾಕ್ಯಗಳು ಸ್ವಾಮಿಯನ್ನು ಕೊಂಡಾಡ ತಕ್ಕ ಮಂತ್ರಗಳಾಗಿವೆ. ನಿಸ್ಸಾರವಾದ ಸಂಸಾರದಿಂದ ಉದ್ಧರಿಸುವ ಮಂತ್ರಗಳಾಗಿವೆ ಅವು. ನಮ್ಮ ಅಜ್ಞಾನಾಂಧಕಾರವನ್ನು ಈ ದಿವ್ಯನಾಮಗಳು ತೊರಿಸುತ್ತವೆ. ಆಮುಷ್ಮಿಕವಾದ ನಿತ್ಯಸೌಕರ್ಯಪ್ರಾಪ್ತಿಗೆ ಅವು ದಿವ್ಯಮಂತ್ರಗಳಾಗಿವೆ. ವ್ಯಸನಗಳಿಂದ ಕಟ್ಟಲ್ಪಟ್ಟ ಜನರನ್ನು ರಕ್ಷಿಸತಕ್ಕಮಂತ್ರವಾಗಿವೆ. ಜನ್ಮಸಾಫಲ್ಯವನ್ನುಂಟುಮಾಡುವ ಮೂಲಮಂತ್ರವಾಗಿರುವ ಶ್ರೀಕೃಷ್ಣ ದಿವ್ಯಮಂತ್ರವನ್ನು “ಎಲ್ಲೈ ನಾಲಗೆಯೇ ಸದಾ ಜಪಿಸು” ಎಂದು ಆಳ್ವಾರರು ಉಪದೇಶಮಾಡಿದ್ದಾರೆ.

ಇಂತಹ ಪರಮಾತ್ಮನ ದಿವ್ಯಜಪವು ಸಕಲ ರೋಗ ನಿವಾರಣೆಗೆ ಔಷಧ ರೂಪವಾದುದು ಎಂದು ಆಳ್ವಾರರು ವರ್ಣಿಸಿದ್ದಾರೆ. “ಹೇ! ಮನಸ್ಸೇ ಇದನ್ನು ಪಾನಮಾಡಿ ಮುಕ್ತಿಹೊಂದು” ಎಂದು ತಿಳಿಸಿದ್ದಾರೆ.

ಪರಮಾತ್ಮನ ದಿವ್ಯನಾಮ ಜಪವು ಅಜ್ಞಾನಾಂಧಕಾರವನ್ನು ನಾಶಮಾಡುವ ಔಷಧವಾಗಿದೆ. ಲೋಕ ಕಂಟಕವಾದ ರಾಕ್ಷಸರ ಪೀಡೆಯನ್ನು ತಪ್ಪಿಸಿ ಭೂಭಾರವನ್ನು ಕಡಮೆ ಮಾಡುವ ಔಷಧ ಮತ್ತು ಸಂಜೀವನದಂತಿರುವ ಮಹಾ ಔಷಧ. ಭಕ್ತರಿಗೆ ಅತ್ಯಂತ ಹಿತಕರವಾದ ಔಷಧ ಸಂಸಾರದ ಮಹದ್ಭಯಗಳನ್ನು ನಿವಾರಣೆಮಾಡಿ ಸಮಸ್ತ ಇಷ್ಟಾರ್ಥಗಳನ್ನು ಕೊಡುವ ಅಪ್ರಾಕೃತ ಔಷಧ. ಹೇ! ಮನಸ್ಸೇ ಇಂತಹ ಶ್ರೀಕೃಷ್ಣ ಎಂಬ ದಿವ್ಯ ಔಷಧವನ್ನು ಏಕಾಗ್ರತೆಯಿಂದ ಪಾನ ಮಾಡು ಎಂದು ತಿಳಿಸಿದ್ದಾರೆ ಆಳ್ವಾರರು.

ಇಲ್ಲಿ “ಉದ್ಧರೇದಾತ್ಮ ನಾತ್ಮಾನಂ ನಾತ್ಮಾನಮವಸಾದಯೇತ್” ಎಂಬ ಗೀತಾವಾಕ್ಯದ ರಹಸ್ಯಾರ್ಥವನ್ನು ಅಳವಡಿಸಲಾಗಿದೆ. “ಹೇ! ಮನಸ್ಸೇ ನೀನು ಚಪಲಚಿತ್ತನಾಗಿ ಕೆಡಬೇಡ, ವಾಕ್ಕಿಗೆ ಪ್ರಾಮುಖ್ಯತೆ ಕೊಡು, ಶ್ರೀಕೃಷ್ಣ ನಾಮವನ್ನು ಸವಿದು ಮುಕ್ತಿ ಪಡೆ. ಮನಸ್ಸೇ, ನೀನು ನನಗೆ ಬಂಧು, ನನ್ನ ನಿನಗೆ ಬಾಧ್ಯತೆ ಇರುವುದೆಂದು ನಂ ಸಹಾಯಮಾಡುವ ವಾಕ್ಯನ್ನು ಬೇಡಿದೆ ಸುಸ್ಥಿರೆಯಲ್ಲಿದ್ದರೆ, ಕಾರ್ಯವು ಸಿದಿ ಏಕಾಗ್ರತೆ ಬರುವುದು”.

ಹೀಗೆ ಮುಕುಂದಮಾಲಾ ಸ್ತೋತ್ರ ಗರ್ಭಿತವಾಗಿರುವುದಲ್ಲದೆ, ಪಠಿಸಲು ಆ ತವೂ ಆನಂದದಾಯಕವೂ ಆಗಿದೆ, ಒ ಶ್ಲೋಕವೂ ಒಂದೊಂದು ರತ್ನದಂತೆ ಪ ಮಹಿಮೆಯನ್ನು ಹೆಚ್ಚು ಹೆಚ್ಚಾಗಿ ಕ ಸುತ್ತದೆ. ಭಕ್ತಿ ಪ್ರಚೋದಕವಾ ಪರಮಾತ್ಮನ ಇಂತಹ ಪರಮ ಭಕ್ತಿಯ ವನ್ನು ಚೆನ್ನಾಗಿ ತಿಳಿಯುವಂತೆ ಆಳ್ವಾರ ಔದಾರ್ಯದಿಂದ ಈ ಸ್ತೋತ್ರರತ್ನದಲ್ಲಿ ಪ್ರಚಾರಮಾಡಿದ್ದಾರೆ.

ಕುಲಶೇಖರ ಆಳ್ವಾರರಿಗೆ, ಶ್ರೀಕೃ ತ್ಮನಲ್ಲಿ ಅಪಾರ ಪ್ರೀತಿ. ಆ ಸ್ವಾ ಅವರು ಎಷ್ಟುವಿಧವಾಗಿ ಪ್ರಾರ್ಥಿಸಿದರು ತೃಪ್ತಿಯಾದಂತೆ ಕಾಣುವುದಿಲ್ಲ, ಶ್ರೀ ಅವರ ಸಾರಸರ್ವಸ್ವ. ಪರಮಾತ್ಮನ ವಿಶೇಷಗಳೆಲ್ಲವನ್ನೂ ಶ್ರೀಕೃಷ್ಣನಲ್ಲಿ ಕ ಸಿದ್ದಾರೆ. ಅವನ ಬಾಲ ಲೀಲೆಗಳನ ಕಂಠದಿಂದ ಹೊಗಳಿದ್ದಾರೆ. ಗೀತಾ ವನ್ನು ಸ್ಮರಿಸಿ, ಭಾಗವತ ಪುರಾಣ ಚ ಅಳವಡಿಸಿದ್ದಾರೆ, ಶ್ರೀಕೃಷ್ಣನ ದಿವ್ಯ ಜಗತ್ತಿನ ಸಾರಸರ್ವಸ್ವ ಎಂಬುದನ್ನು ಶ್ಲೋಕದಲ್ಲಿ ಆಳ್ವಾರರು ಹೀಗೆ ವಣಿ

ಕೃಷ್ಣೋ ರಕ್ಷತು ನೋಜಗತ್ರಯ ।
ಕೃಷ್ಣಂ ನಮಸ್ಯಾಮ್ಯಹಂ ।
ಕೃಷ್ಣೇನಾಮರ ಶತ್ರವೋ ವಿನಿಹತಾ
ಕೃಷ್ಣಾಯತಸ್ಮೈ ನಮಃ ।
ಕೃಷ್ಣಾದೇವ ಸಮುತ್ಥಿತಂ ಜಗದಿದ
ಕೃಷ್ಣಸ್ಯದಾಸೋಽಸ್ಮ್ಯಹಂ ।
ಕೃಷ್ಣೇತಿಷ್ಠತಿ ಸರ್ವಮೇತದಖಿಲಂ
ಹೇ ಕೃಷ್ಣ ರಕ್ಷಸ್ವ ಮಾಂ ॥

ಮೂರುಲೋಕದ ಗುರುವಾದ ನಮ್ಮನ್ನು ರಕ್ಷಿಸಲಿ. ಕೃಷ್ಣನಿಗೆ ನಮಸ್ಕ ರಿಸುತ್ತೇನೆ, ಅನೇಕ ಶತ್ರುಗಳು ಸಂಹರಿಸಲ್ಪಟ್ಟರು. ಈ ಜಗತ್ತು ಕ ಯಿಂದ ಉತ್ಪನ್ನವಾಯಿತು, ಕೃಷ್ಣ ನಾನು ವಂದಿಸುತ್ತೇನೆ. ಜಗತ್ತೆಲ್ಲವು ನೆಲಸಿರುವುದು, ಅಂತಹ ಶ್ರೀಕೃಷ್ಣ ನನ್ನನ್ನು ರಕ್ಷಿಸು.

(29ನೇ ಪು

# ವಾದಿರಾಜರ ವೆಂಕಟಾಚಲಯಾತ್ರೆ

ನೇ ಶತಮಾನದ ಪ್ರಾರಂಭದ ದಿನ
. ಈಗಿನಂತೆ ಆಗ ತಿರುಪತಿಗೆ ಹೋಗಿ
ಯಾವುದೇ ರಾಜಮಾರ್ಗ ಸೌಕರ್ಯ
ಲಿಲ್ಲ. ಕಳ್ಳಕಾಕರ ಉಪಟಳಗಳಿಂ
ಯೂ ತೀರ್ಥಯಾತ್ರೆಗೆ ಹೋಗುವುದು
ದುಸ್ತರವಾಗಿತ್ತು. ಆಧುನಿಕ ವಾಹ
ಸಾಯಗಳೂ ಇಲ್ಲದ ದಿನಗಳು.
ಲ್ಲಾ ಅನಾನುಕೂಲತೆಗಳಿದ್ದಾಗ್ಯೂ
ರಾಜರು ಅಲ್ಪ ಪರಿವಾರದಿಂದೊಡ
ಕಾಲುನಡಿಗೆಯಲ್ಲೇ ಭೂವೈಕುಂಠ
ಿದ್ದ ಶ್ರೀ ವೆಂಕಟಾಚಲಕ್ಕೆ ಬಂದರು.
ಶೇಷ ಪರ್ವತವು ಅನೇಕ ತೀರ್ಥಗಳಿಂ-
ಡಗೂಡಿದ್ದು, ಅಲ್ಲಲ್ಲಿ ಅನೇಕ ಋಷಿಗಳು
ಸ್ಸನ್ನಾಚರಿಸುತ್ತಾ ಶ್ರೀ ಶ್ರೀನಿವಾಸ
ಭಜಿಸುತ್ತಿದ್ದರು. ಚತುರ್ಮುಖ
ಅಧಿಕಾರಿಯಾದ ಋಜೂತ್ತಮ – ವಾದಿ
ರಿಗೆ ಶೇಷಾಚಲದ ಸೋಪಾನದೆಲ್ಲೆಡೆ
ಲ್ಲೂ ಇರತಕ್ಕ ಶ್ರೀ ಹರಿಯ ಸನ್ನಿಧಾನವು
ತ್ಯಕ್ಷವಾಗಿ ತೋರಿದ್ದರಿಂದ, ಪ್ರಕೃತಿ
ಂದುಂಟಾದ ಏರು ತಗ್ಗಾದ ಕಲ್ಲು
ಟ್ಟಿಲುಗಳಿಂದಾದ ಪ್ರಯಾಸಕರವಾದ
ರ್ಗದಲ್ಲಿ ಪಾದಗಳನ್ನಿಟ್ಟು ಹತ್ತಲು
ನಸ್ಸು ಬಾರದ ಈ ಮಹಾನುಭಾವರು
ಮ್ಮ ಮೊಳಕಾಲನ್ನೂರಿಕೊಂಡೇ
ನಿವಾಸನ ದರ್ಶನಕ್ಕೆ ಬಂದರಂತೆ!

ಆಗ ದೇವಸ್ಥಾನ ಆಡಳಿತವು ಅಧಿಕಾರಿಗಳ
ಯೊಳಗಿತ್ತು. ಅಂದು ಕಾರಣಾಂತರ
ದ ಸ್ವಾಮಿಯ ದರ್ಶನಕ್ಕೆ ನಿರ್ಬಂಧ
ಸ್ತು ವಾದಿರಾಜರನ್ನು ಒಳಕ್ಕೆ ಹೋಗ
ತೆ ತಡೆದರು. ಏಕಾಂತ-ಭಕ್ತರೆನಿಸಿದ
ುರುಗಳು ದೇವರಗುಡಿಯ ಉತ್ತರಭಾಗ
ಲ್ಲಿ ಕುಳಿತು ಸ್ವಾಮಿಯನ್ನು ಧ್ಯಾನಿಸ
ಡಗಿದರು. ಭಕ್ತವತ್ಸಲನಾದ
ಸ್ವಾಮಿಯು ಆ ಗುಡಿಯ ಗೋಪುರದಲ್ಲಿರುವ
ತೀಕದಲ್ಲಿ ತನ್ನ ಸಂಪೂರ್ಣ ಸನ್ನಿಧಾನ
ನ್ನು ತೋರಿ ಗುರುಗಳಿಗೆ ಅನುಗ್ರಹ
ಾಡಿದನು. ಅಂದಿನಿಂದ ಇಂದಿನವರೆಗೂ
ವಿಗ್ರಹದಲ್ಲಿ ಶ್ರೀನಿವಾಸನ ಸನ್ನಿಧಾನವು
ಜ್ವಲಿಯದೇ ಉಳಿದು "ವಿಮಾನ
ೀನಿವಾಸ"ನೆಂಬ ಹೆಸರಿನಿಂದ ಪ್ರಸಿದ್ಧ
ಾಗಿದೆ. ಭಕ್ತರು ತರಬಹುದಾದ ಫಲ-
ಪುಷ್ಪ – ಕಾಯಿಗಳನ್ನು ನೈವೇದ್ಯಮಾಡಿ ಕೊಡುವ ಸಂಪ್ರದಾಯ ಈ ದೇವಸ್ಥಾನ ದಲ್ಲಿಲ್ಲದಿರುವುದರಿಂದ ಶ್ರೀನಿವಾಸನಿಗೆ ನೈವೇದ್ಯ ಮಾಡಬಯಸುವ ಭಕ್ತರು ಈ 'ವಿಮಾನ ಶ್ರೀನಿವಾಸ'ನಿಗೇ ಅದನ್ನರ್ಪಿಸಿ ಆ ಪ್ರಸಾದವನ್ನು ಊರಿಗೆ ಕೊಂಡೊಯ್ಯುವ ಪದ್ಧತಿಯೂ ಇದ್ದಿತಂತೆ.

ಗುರುರಾಜರಿಗೆ ಈ ರೀತಿ ಶ್ರೀನಿವಾಸನು ಪ್ರಸನ್ನನಾದ ಸಂಗತಿ ತಿಳಿಯುತ್ತಲೇ ಅಧಿಕಾರಿಗಳ ಇವರಿಗೆ ಸಾಕಷ್ಟು ಗೌರವ ತೋರಿದರು. ನಂತರ ವಾದಿರಾಜರು ತಂತ್ರ ಸಾರ ಆಗಮೋಕ್ತ ಕ್ರಮದಿಂದ ಸ್ವಾಮಿಯನ್ನು ಪೂಜಿಸಿ ದಿವ್ಯವಾದ ಸಾಲಿಗ್ರಾಮ ಮಾಲಿಕೆಯೊಂದನ್ನು ಅರ್ಪಿಸಿದರು.

ಅಂದಿನಿಂದ ಈ ಮಠದ ಸ್ವಾಮಿಗಳು ತಿರುಪತಿಗೆ ಬಂದರೆ ಒಂದು ದಿನ ಶ್ರೀನಿವಾಸನ ಅರ್ಚನೆಯನ್ನು ಮಾಡುವ ಪದ್ಧತಿ ಇರುವದಾಗಿ ಅಲ್ಲಿಯ ದಾಖಲೆಯಲ್ಲಿದೆ.

ಶ್ರೀನಿವಾಸಧ್ಯಾನಪರರಾಗಿ ವಾದಿರಾಜ ಪೂಜ್ಯಚರಣರು ಇರುತಿದ್ದ ಆ ಕಾಲದಲ್ಲಿ ಅನಾದಿಯಿಂದಲೂ ಶ್ರೀದೇವಿ-ಭೂದೇವಿಯರಿಂದೊಡಗೂಡಿದ್ದ ಸ್ವರ್ಣಮಯವಾದ ಸ್ವಾಮಿಯ ಮೂರ್ತಿಯು ಮೂಲವಿಗಹದ ಸನಿಧಾನದಲ್ಲಿ ನಿತ್ಯದಲ್ಲೂ ಪೂಜೆಗೊಳ್ಳುತ್ತ ಮಹಾ ಸನ್ನಿಧಾನ ಉಳ್ಳದ್ದಾಗಿತ್ತು. ಆಗೊಂದುದಿನ ದೇವಸ್ಥಾನಾಧಿಕಾರಿಗಳಿಗೆ ಶ್ರೀನಿವಾಸನು ಸ್ವಪ್ನದಲ್ಲಿ ಕಾಣಿಸಿಕೊಂಡು, ವಾದಿರಾಜರಿಗೆ ಆ ಸ್ವರ್ಣಮೂರ್ತಿಯನ್ನು ಅರ್ಪಿಸಲು ಆಜ್ಞೆಮಾಡಿದನು. ಗುರುಗಳ ಸ್ವಪ್ನದಲ್ಲೂ ಕಾಣಿಸಿಕೊಂಡು ದೇವಾಲಯದ ಅಧಿಕಾರಿಗಳಿಂದ ತನ್ನ ವಿಗ್ರಹವನ್ನು ಸ್ವೀಕರಿಸಿ ಅದನ್ನು ನಿತ್ಯದಲ್ಲೂ ಪೂಜಿಸಬೇಕೆಂದೂ ಅವರ ನಂತರದ ಪರಂಪರೆಯವರೂ ಪೂಜಿಸತಕ್ಕದೆಂದು ಸಿದನು. ಶ್ರೀ ಮದಾನಂದ ತೀರ್ಥರ ಪಾಶವಶೀಕೃತನಾಗಿ ಶ್ರೀಕೃಷ್ಣ ರೂಪ ವಾದಿರಾಜ ಯತಿಪುಂಗವರ ಧಾನಕ್ಕೆ ಬಂದನು. ಮಾರನೆಯ ಅಧಿಕಾರಿಗಳು ತಂದೊಪ್ಪಿಸಿದ ಆ ವಿ ವನ್ನು ಯತಿಕುಲಾಗ್ರಣಿಗಳು ಸ್ವೀ ಅತ್ಯಂತಭಕ್ತಿಯಿಂದ ಅದನ್ನು ಸಂಸ್ಥಾನದ ಮೂಲವಿಗ್ರಹದ ಯಲ್ಲಿಟ್ಟು ಪೂಜಿಸತೊಡಗಿದರು. ನಿಂದ ಈ ವರೆಗೂ ಆ ಸಂಸ್ಥಾನದ ಸ್ವರ್ಣ ಶ್ರೀನಿವಾಸನ ಪೂಜೆ ನಡೆಯು

ಈ ರೀತಿ ಕಲಿಯುಗದ ಕ ಕಾಮಧೇನುವೆಂದು ಪ್ರಸಿದ್ಧನಾದ ತಿ ವೆಂಕಟೇಶ್ವರನ ಸ್ತುತಿಯನ್ನು ಶ್ರೀ ರಾಜರು ತಮ್ಮ ತಿರುಪತಿ ವಾಸ್ತವ್ಯ ದಿನಗಳಲ್ಲಿ ಈ ರೀತಿಯಾಗಿ ಮಾಡಿದ್ದಾ

ಶ್ರೀ ವೇಂಕಟ ಲಕ್ಷ್ಮ್ಯೈಲವಾಸೀ
ದಾಸೀಕೃತಾಮರಃ ।
ಛಾಯಯಾ ಪಾತು ಮಾಂ ನಿತ್ಯ
ಶ್ರೀನಿವಾಸ ಸುರದ್ರುಮಃ ॥
ದೃಷ್ಟ್ವಾ ದಿಶಿ ದಿಶಿ ಶ್ರೇಯಾನ್
ದಯಯಾ ಪಾಲಯನ್ನಿವ ।
ವರ್ತತೇ ವಿಶ್ವತಶ್ಚಕ್ಷುಃ
ವೇಂಕಟೇ ವೇಂಕಟೇಶ್ವರಃ ॥

ಪಾಪನಾಶಕವಾದ, ವೆಂಕಟಾದ್ರಿ ಸುಂದರ ಶೈಲವಾಸಿಯಾದ, ದೇವತೆ ದಾಸರನಾಗಿಸಿಕೊಂಡ. ಶ್ರೀನಿವಾ ಕಲ್ಪವೃಕ್ಷವು ತನ್ನ ನೆರಳಿನಲ್ಲಿ ನನ್ನನ್ನು ರಕ್ಷಿಸಲಿ.

ವೆಂಕಟವೆಂಬ ಪರ್ವತದ ಅಧಿಪ ಶ್ರೀನಿವಾಸನು ದಿಕ್ಕು ದಿಕ್ಕುಗ ತನ್ನ ಭಕ್ತರನ್ನು ಈಕ್ಷಿಸಿ ರಕ್ಷಿಸ ಎಲ್ಲೆಡೆಗೂ ಕಣ್ಣಿಟ್ಟು ವೆಂಕ ಮೇಲೇರಿ ನಿಂತಿದ್ದಾನೆ.

**ಶ್ರೀಮತಿ ವಾಣಿ ವಿ. ಕುಲಕರ್ಣಿ**

ಯೋ ಶಂಖಚಕ್ರೋಽ
ಜ್ವಲ ಬಾಹುಯುಗ್ಮಾಃ।
ಸ್ವಾಂಘ್ರಿಂ ಭಜಂತೇ
ಭವ ಸಿಂಧುರೇಷಾಂ।
ಕಲಾ ಪ್ರಮಾಣಸ್ತ್ವಿತಿ
ವೇಂಕಟೇಶಃ।
ಸ್ಫುಟೀಕರೋತ್ಯಾತ್ಮ
ಕರಾಂಬುಜಾತ್ಯೈಃ॥

ಶಂಖ ಚಕ್ರ ಚಿನ್ಹೆಗಳಿಂದ ಶೋಭಿತವಾದ ಬಾಹುಗಳುಳ್ಳವನಾಗಿ ತನ್ನ ಪಾದ ಭಜಿಸುವ ಭಕ್ತರಿಗೆ ಈ ಸಂಸಾರ ಸಮುದ್ರವು ದಾಟಲು ಸುಲಭವಾಗುವಂತೆ ಸೊಂಟಮಟ್ಟದ್ದಾಗಿವೆ, ಎಂದು ಶ್ರೀನಿವಾಸನು ತನ್ನ ಕರ ಕಮಲಗಳಿಂದ ಸೂಚಿಸಿದ್ದಾನೆ.

ಪ್ರಾಯೋಽನ್ಯತ್ರ ಗತಾಂ ಶ್ರಿಯಂ
ನಿಜವಶಾಂ ಕರ್ತುಂ ಮುಹುಃ
ಕಾಂಕ್ಷಿತಂ
ಭಕ್ತಾನಾಂ ಪ್ರದಿಶನ್ ಧನಂ ಪ್ರತಿದಿನಂ
ಸಂಸಾಧ್ಯ ಸಾಧ್ಯಪ್ರಿಯಃ।
ತತ್ರತ್ರೈವ ಪುನಃ ಸಹಸ್ರಗುಣಿತಂ
ಪಶ್ಯನ್ ಘನಶ್ಯಾಮಲಃ
ತೇಷಾಂ ವೇಶ್ಮಸು ವಿಸ್ಮಿತೋ
ನಿವಸತಿ ಶ್ರೀ ವೇಂಕಟೇಶೋಽನಿಶಂ॥

ಘನಶ್ಯಾಮನೂ, ದೇವತೆಗಳ ಪ್ರೀತಿ ಪಾತ್ರನೂ ಆದ ಶ್ರೀ ವೆಂಕಟೇಶನು, ಹೆಚ್ಚಾಗಿ ಭಕ್ತರಮನೆಗೇ ಹೋಗುತ್ತಿರುವ ಲಕ್ಷ್ಮಿ (ಸಂಪತ್ತು) ಯನ್ನು ತನ್ನ ಅಧೀನದಲ್ಲಿರಿಸಿಕೊಳ್ಳಲೋಸುಗ ಭಕ್ತರಭೀಷ್ಟಗಳನ್ನು ಮತ್ತೆ ಮತ್ತೆ ಸಲ್ಲಿಸಿ ಅವರಿಂದ ಪ್ರತಿ ದಿವಸವೂ ಲಕ್ಷ್ಮಿ ವೃದ್ಧಿ ಹೊಂದುವುದನ್ನು ನೋಡಿ ಆಶ್ಚರ್ಯಪಟ್ಟು ನಿರಂತರದಲ್ಲಿಯೂ ಅಲ್ಲಿಯೇ ವಾಸಿಸುವನು.

ಆರೂಢ ಗರುಡಸ್ಕಂಧಂ
ಆಲಿಂಗಿತ ರಮಾಧರಂ।
ಆನಮಜ್ಜನ ಸರ್ವಸ್ವಂ
ಆಶ್ರಯೇ ವೇಂಕಟೇಶ್ವರಂ
ಕಶಿಪೂಕೃತ್ಯ ಯಂ ಶೇತೇ
ಗಿರೀಕೃತ್ಯಾಧಿ ತಿಷ್ಠತಿ।
ಅವತೀರ್ಣೋಽನುಜೀಕೃತ್ಯ
ಸ ತದ್ಭಕ್ತಾಗ್ರಣೀಃ ಫಣೀ॥

ಗರುಡನ ಹೆಗಲಮೇಲೇರಿರುವ, ಶ್ರೀ ದೇವಿಯರಿಂದಾಲಂಗಿತನಾಗಿರುವ, ನ ಭಕ್ತರ ಸರ್ವಸ್ವನಾಗಿರುವ ವೆಂ ನನ್ನು ಆಶ್ರಯಿಸುತ್ತೇನೆ. ಆತ ಯನ್ನಾಗಿಸಿಕೊಂಡು ಮಲಗಿದಂಥ ವನ್ನಾಗಿ ಮಾಡಿಕೊಂಡು ನಿಂತ ರಾಮಾವತಾರದಲ್ಲಿ ತಮ್ಮನಾಗಿ ನೆಂಬ ಭಕ್ತಾಗ್ರಣಿಯಿಂದ ಸೇವಿ ತ್ತಾನೆ.

ಶಂಕರ ರವಿ ಶಶಿ ಮುಖ್ಯಾಃ
ಕಿಂಕರ ಪದವೀ ಮುಪಾಶ್ರಿತಾ
ವೇಂಕಟಗಿರಿ ನಾಥೋಸೌ
ಪಂಕಜನಯನಃ ಪರಾತ್ಪರೋ
ಶ್ರೀ ವೇಂಕಟಗಿರಿ ದ್ರೋಣೀ
ಕ್ಷೋಣೀ ಯಸ್ಯಾನಣೀಯಸೀ
ತಂ ವರೇಣ್ಯಂ ಸುರಾಗ್ರಣ್ಯಂ
ವೇದಗಮ್ಯಂ ಭಜಾಮಹೇ।

ರುದ್ರ – ಸೂರ್ಯ – ಚಂದ್ರರೇ ವ ದೇವತೆಗಳು ವೆಂಕಟೇಶ್ವರನನ್ನು

(29ನೇ ಪು

**ಸಂದರ್ಶಿಸಿ** **ಆವ**

ಉಲ್ಲಾಸದಾಯಕ ಹಾಗೂ ಉದ್ಬೋಧಕ

# ಶ್ರೀ ವೆಂಕಟೇಶ್ವರ ದೇವಾಲಯಕಲಾವಸ್ತುಸಂಗ್ರಹಾಲಯ

## ನಮ್ಮಾಳ್ವಾರ್ ದೇವಾಲಯ

**(ಶ್ರೀ ಗೋವಿಂದರಾಜಸ್ವಾಮಿ ದೇವಾಲಯದ ಬಲಬದಿ)**

ವೈಷ್ಣವ ದೇವಾಲಯಗಳ ಬಗ್ಗೆ ವಿವರಗಳನ್ನು ನೀಡುವ ಮೊದಲ ವಸ್ತು ಸಂಗ್ರಹಾಲಯ, ದೇವಾಲಯಗಳ ನಿಮ ವಿಗ್ರಹಕಲೆ, ವಿಮಾನದ ವಿವಿಧ ಬಗೆಗಳು – ಎಲ್ಲವನ್ನೂ ಚಿತ್ತಾಕರ್ಷಕವಾಗಿ ನಿರೂಪಿಸಲಾಗಿದೆ.

**ಪ್ರವೇಶದರ–ಪ್ರತಿ ವ್ಯಕ್ತಿಗೆ – ರೂ 1-00 ಮಾತ್ರ**

# ಶ್ರೀ ರಾಮಕೃಷ್ಣ ಪರಮಹಂಸ

ಃ ಕೃತ್ಯ ಕಾಯಕದಿಂದಾದದೇನು ?
ು ಮನ ಚಲಿಸಿ ತಂದು ದಾಸೋಹವ
ಮಾಡುವ
ಮ ಸದ್ಭಕ್ತನ ಪಾದವ ತೋರಯ್ಯ ಎನಗೆ!
ಂತಿನೆ ಆತನ ತನುಶುದ್ಧ, ಆತನ ಮನಶುದ್ಧ
ನ ನಡೆಶುದ್ಧ, ನುಡಿಯೆಲ್ಲ ಪಾವನವು...

ುಬ-ಬಸವಣ್ಣನವರ ಮಾತುಗಳನ್ನು ನಾವು ದಾಗ; ಒಬ್ಬ ನಿಜವಾದ ಭಕ್ತ ಹೇಗಿರಬೇಕು ದನ್ನೂ ಮತ್ತು ಇಂಥ ಭಕ್ತನ ಘನತೆ ನು ಎಂಬುದನ್ನೂ ನಾವು ಮನಗಾಣ ು. ಈ ರೀತಿ ತನ್ನ ತನು, ಮನ, ನಡೆ, ನ್ನು ಶುದ್ಧವಾಗಿಟ್ಟುಕೊಂಡು ನಿಷ್ಕಲ್ಮಷ ಭಕ್ತಿಯಿಂದ ಪರಮಾತ್ಮನನ್ನು ಸ್ಮರಿಸ –ಧ್ಯಾನಿಸಬೇಕು ಎಂದು ಹೇಳುತ್ತಾನೆ. ್ರಿ 19 ನೆಯ ಶತಮಾನದಲ್ಲಿ ತನ್ನ ಸರ್ವಸ್ವ ದೇವರಿಗಾಗಿ ಅರ್ಪಿಸಿಕೊಂಡು ಭಕ್ತಿಯ ಂತಿಮ ಶಿಖರವನ್ನೇರಿದ ಕೀರ್ತಿ ಮಹಾ ಮ ಶ್ರೀ ರಾಮಕೃಷ್ಣ ಪರಮಹಂಸರಿಗೆ ಸಲ್ಲು ಅಣುರೇಣುತೃಣಕಾಷ್ಠಗಳಲ್ಲಿಯೂ ಐಕ್ಯ ುವ ಆ ದಯಾಮಯನಾದ ಪರಮಾತ್ಮ ಕುರಿತು ಚಿಂತಿಸಿದವರೂ, ಸೇವಿಸಿದವರೂ ಕರಿದ್ದಾರೆ. ಅವರಲ್ಲ ಆ ಪರಮಾತ್ಮನಿಗಾಗಿ ನ್ನು ತಾನು ಅರ್ಪಿಸಿಕೊಂಡು ದೇವರನು. ಸಿ, ಕೃತಪುಣ್ಯರಾದವರ ಸಾಲಿನಲ್ಲಿ ಶ್ರೀ ಕೃಷ್ಣ ಪರಮಹಂಸರನ್ನೂ ನಾವು ಕಾಣ ದು.

ಂಗಾಳ ಪ್ರಾಂತ್ಯದ ಹೂಗ್ಲಿ ಜಿಲ್ಲೆಯಲ್ಲಿ ಾರಪುಕುರವೆಂಬ ಸಣ್ಣದೊಂದು ಗ್ರಾಮ. ಕಲ್ಕತ್ತೆಯಿಂದ ಸುಮಾರು ಅರವತ್ತು ಮೈಲಿ ರದಲ್ಲಿದೆ. ಅಲ್ಲಿ ಕ್ಷುದಿರಾಮ ಚಟ್ಟೋಪಾ ಯ ಮತ್ತು ಚಂದ್ರಾದೇವಿ ಎಂಬ ಬ್ರಾಹ್ಮಣ ಪತಿಗಳು ವಾಸವಾಗಿದ್ದರು. ಸದಾ ಪರಮಾತ್ಮ ಭಕ್ತಿಯನ್ನಿಟ್ಟು, ಅತಿಥಿ ಅಭ್ಯಾಗತರಲ್ಲಿ ಷ ಗೌರವನ್ನು ಇಟ್ಟು, ಕಾಲಹರಣ ಮಾಡು ್ದರು. ಇಂಥ ಪವಿತ್ರ ದಂಪತಿಗಳ ಉದರದಲ್ಲಿ ೩೯ ಫೆಬ್ರವರಿ 18 ರಂದು ರಾಮಕೃಷ್ಣರು ನೆ ಕಾಯಿಗಳಿಗೆ ನಾಲ್ಕನೆಯ ಮಗುವಾಗಿ ಿಸಿದರು. ರಾಮಕೃಷ್ಣರ ಹುಟ್ಟು ಹೆಸರು ಾಧರನೆಂದು. ಬರುಬರುತ್ತಾ ಅವರು ಮಾತ್ಮನಲ್ಲಿ ಅವಿಚ್ಛಿನ್ನವಾದ ಭಕ್ತಿ ಗೌರವ ತ್ತು ಶ್ರದ್ಧೆಗಳಿಂದ ಸನಾತನ ಧರ್ಮದ ಕೀರ್ತಿ ಗಿಲೆತ್ತರಕ್ಕೆ ಮೆರೆಯಲು ಕಾರಣರಾಗಿ ರಾಮ ಷ್ಣ ಪರಮಹಂಸರಾದರು. ಈ ಪವಿತ್ರ ನಾಮ ದಲೇ ಲೋಕದಲ್ಲಿ ಖ್ಯಾತಿವಂತರಾದರು.

ಮಗು ಗದಾಧರನನ್ನು ಅವರ ಮಾತಾಪಿತರು ಾಲಕ್ಕೆ ಶಾಲೆಗೆ ಕಳಿಸಿ ಅಕ್ಷರಾಭ್ಯಾಸ ಪ್ರಾರಂಭಿಸಿದರು. ಆದರೆ ವಿದ್ಯಾಭ್ಯಾಸದಲ್ಲಿ, ಆಟಪಾಠಗಳಲ್ಲಿ ಅವನಿಗೆ ವಿಶೇಷವಾದ ಯಾವ ಉತ್ಸುಕತೆಯಾಗಲಿ ಆಸಕ್ತಿಯಾಗಲಿ ಹುಟ್ಟಲಿಲ್ಲ. ಇವೆಲ್ಲಕ್ಕೂ ಮಿಗಿಲಾದ ಮತ್ತಾವುದೋ ಒಂದು ಶಕ್ತಿ ತನ್ನ ಅಂತರ್ಯದಲ್ಲಿ ಅಡಗಿ ತನ್ನ ಮನಸ್ಸನ್ನು ಆ ಕಡೆಗೆ ಸೆಳೆಯುತ್ತಿದೆ ಎಂದು ತಿಳಿದ.

ಹೀಗೆ ಕಾಲಚಕ್ರ ತಿರುಗುತ್ತಿರಲು ರಾಮಕೃಷ್ಣರ ಏಳನೆಯ ವಯಸ್ಸಿನಲ್ಲಿ ಅವರ ತಂದೆಯವರು ಇಹಲೋಕ ತ್ಯಜಿಸಿದರು. ಇದರಿಂದ ರಾಮಕೃಷ್ಣರ ತಾಯಿ ಮತ್ತು ಅಣ್ಣಂದಿರಿಗೆ ವಿಪರೀತ ದುಃಖವಾಯಿತು. ಸಂಸಾರದ ಒಂದು ಚೇತನಾ ಶಕ್ತಿ ಇದ್ದಕ್ಕಿದ್ದಂತೆ ಮಾಯವಾದಂತಾಗಿ ತುಂಬ ಕಷ್ಟಕ್ಕೀಡಾದರು. ವರಮಾನ ತರುವ ಯಾವುದೇ ಆಸ್ತಿ ಅವರ ಪಾಲಿಗಿರಲಿಲ್ಲ. ಇದರಿಂದ ಜೀವನ ತುಂಬ ಕಷ್ಟಸಾಧ್ಯವಾದಾಗ ರಾಮಕೃಷ್ಣರ ಅಣ್ಣ ರಾಮಕುಮಾರ ಕಲ್ಕತ್ತೆಗೆ ಹೋಗಿ ಸಂಸ್ಕೃತ ಪಾಠ ಹೇಳಿಕೊಡಲು ತೊಡಗಿದರು ಅದರಿಂದ ಬರಬಹುದಾದ ಅಲ್ಪ ಆದಾಯದಿಂದ ಹೇಗೋ ಸಂಸಾರ ಸಾಗಿಸುತ್ತಿದ್ದರು.

ಇತ್ತ ರಾಮಕೃಷ್ಣರು ಪಾಠಶಾಲೆಗೆ ಹೋಗುವುದನ್ನು ಬಿಟ್ಟು ತನ್ನಲ್ಲಿ ಅಡಗಿ ಕಾಣಿಸುತ್ತಿರುವ ಅಗೋಚರ ಶಕ್ತಿಯ ಬಗ್ಗೆ ಚಿಂತಿಸುತ್ತ ದಿನ ಕಳೆಯುತ್ತಿದ್ದರು. ಇವರ ಮನೆಯ ಹತ್ತಿರ ಒಂದು ಸತ್ರ ಇತ್ತು. ಪರಸ್ಥಳಿಗರೂ ಯಾತ್ರಾರ್ಥಿಗಳೂ ರಾತ್ರಿ ವೇಳೆಯಲ್ಲಿ ಈ ಸತ್ರದಲ್ಲಿ ತಂಗಿದ್ದು ಹೋಗುತ್ತಿದ್ದರು. ಅವರು ಸದಾ ಪರಮಾತ್ಮನನ್ನು ಧ್ಯಾನಿಸುತ್ತ ಭಜನೆ ಮಾಡುತ್ತ ಆ ರಾತ್ರಿಯನ್ನು ಕಳೆಯುತ್ತಿದ್ದರು. ಇಂಥ ರಾತ್ರಿಗಳನ್ನು ಸನ್ಯಾಸಿಗಳೊಂದಿಗೆ ದೇವರನ್ನು ಸ್ಮರಿಸುತ್ತ, ಅವರಿಗೆ ಸಣ್ಣಪುಟ್ಟ ಸಹಾಯ ಮಾಡುತ್ತ ರಾಮಕೃಷ್ಣರು ಕಳೆಯತೊಡಗಿದರು. ಹೀಗೇ ದಿನಗಳುರುಳುತ್ತಿದ್ದಂತೆ ಅವರಿಗೆ ದೇವರಲ್ಲಿ ಅಪಾರ ಭಕ್ತಿ ಹುಟ್ಟಿತು.

ಶ್ರೀ ವ.ತಿ. ರಾಮಕೃಷ್ಣಯ್ಯ 'ರಾಕಿ'

ಅನ್ನಾಹಾರಗಳನ್ನು ತೊರೆದು ಒಮ್ಮೊಮ್ಮೆ ಮಾತ್ಮನ ಧ್ಯಾನದಲ್ಲಿಯೇ ಕುಳಿತುಬಿಡುತ್ತಿದ್ದ

ತಮ್ಮನ ಈ ಕೆಲವಾದ ವರ್ತನೆಯನ್ನು ಇವರು ಊರಿನಲ್ಲಿದ್ದರೆ ಓದುವುದಿಲ್ಲ ಎಂದು ಭ ಅವರ ಅಣ್ಣ ಇವರನ್ನು ಕಲ್ಕತ್ತೆಗೆ ಕರೆಸಿಕೊ ಶಾಲೆಗೆ ಹಾಕಲು ಬಯಸಿದರು. ಆದ ಕೃಷ್ಣರ ಬುದ್ಧಿ ಮತ್ತು ಭಕ್ತಿ ಪಕ್ವತೆಯ ಯತ್ತ ನಡೆದಿತ್ತು. ಆ ಸಮಯದಲ್ಲಿ ಅವರು ಅಣ್ಣನಿಗೆ "ನನಗೆ ಅನ್ನ ಬಟ್ಟೆ ಕೊಡುವ ಬೇಡ ಯಾವುದು ನನ್ನ ಹೃದಯಕ್ಕೆ ಬೇ ಕೊಡಬಲ್ಲುದೋ, ಯಾವುದನ್ನು ಮನುಷ್ಯ ನಿತ್ಯತೃಪ್ತನಾಗುತ್ತಾನೆಯೋ ಅ ಯನ್ನು ಪಡೆಯಲು ನಾನು ಯತ್ನಿಸು ನನ್ನನ್ನು ಸುಮ್ಮನೆ ಕಾಡಬೇಡಿ" ಎಂದು ಖಂಡಿತನಾಗಿ ನುಡಿದರು. ಇವನು ವಿದ್ಯೆ ತೊ ಕಲಿಯಲಾರ ಎಂಬುದನ್ನರಿತ ಅ ರಾಮಕೃಷ್ಣರನ್ನು ತಾನು ಕೆಲವು ಮ ಹೋಗಿ ಪೂಜೆ ಮಾಡುತ್ತಿದ್ದ ಕಾಯ ನಡೆಸಿಕೊಡು ಬಾ ಎಂದರು. ಇದನ್ನು ಸ ಷದಿಂದ ಸ್ವೀಕರಿಸಿ ಸದಾ ಪರಮಾ ಸೇವಿಸತೊಡಗಿದರು ಪೂಜೆಯಲ್ಲಿ ಮಾಡದೆ ಭಕ್ತಿಯಿಂದ, ಶಾಂತತೆಯಿಂ ಪೂರ್ಣತೆಯಿಂದ ದೇವರನ್ನು ಪೂಜಿ



ರಾಮಕೃಷ್ಣರ ರೀತಿಯನ್ನು ಕಂಡವರು ಬೆರಗಾಗುತ್ತಿದ್ದರು. ಆಶ್ಚರ್ಯಪಡುತ್ತಿದ್ದರು.

ಈ ರೀತಿ ಇರುವಾಗ ಕಲ್ಕತ್ತೆಯಲ್ಲಿ ರಾಸಮಣಿ ಎಂಬ ದೊಡ್ಡ ದೇವೀ ಭಕ್ತೆ ಇದ್ದಳು. ಅವಳು ದಕ್ಷಿಣೇಶ್ವರ ಎಂಬಲ್ಲಿ ಗಂಗಾನದಿಯ ತೀರದಲ್ಲಿ ದೊಡ್ಡದೊಂದು ಕಾಳಿಕಾ ದೇವಾಲಯ ಕಟ್ಟಿಸಿದಳು. ಇದರ ಪೂಜಾ ಕಾರ್ಯಕ್ಕೆ ರಾಮಕೃಷ್ಣರನ್ನು ನೇಮಿಸಿದಳು. ಸಂತಸದಿಂದ ಒಪ್ಪಿಕೊಂಡು ದಿನವೂ ಕಾಲಕ್ಕೆ ಸರಿಯಾಗಿ ದೇವಿಯ ಪೂಜೆಯನ್ನು ಭಯ ಭಕ್ತಿಯಿಂದ ಮಾಡಿಕೊಂಡು ಬರುತ್ತಿದ್ದರು. "ಆದರೆ ಇದರಲ್ಲಿ ಶ್ರೀ ರಾಮಕೃಷ್ಣರ ಜೀವನ ಕೊನೆಗೊಂಡಿದ್ದರೆ ಅವರು ಒಬ್ಬ ಪೂಜಾರಿ ಮಾತ್ರ ಆಗುತ್ತಿದ್ದರು. ಜಗದ್ವಂದ್ಯ ಶ್ರೀರಾಮಕೃಷ್ಣರು ಆಗುತ್ತಿರಲಿಲ್ಲ. ದಿನವೂ ತಾವು ಪೂಜಿಸುತ್ತಿದ್ದ ಈ ಶಿಲಾ ಮೂರ್ತಿಯಲ್ಲಿ ಚೇತನ ಇದೆಯೇ? ಈ ದೇವಿ ಕೇವಲ ಶಿಲ್ಪಿಗಳು ಕಡೆದ ವಿಗ್ರಹವೋ ಅಥವಾ ಭಕ್ತರು ಕಂಡ ದರ್ಶನವೋ? ಇಲ್ಲವೇ ಆಕೆ ಕೇವಲ ಒಂದು ಕಲ್ಪನೆಯ ಕಂತೆಯೋ ಅಥವಾ ಭಕ್ತರ ಮೊರೆಯನ್ನು ಕೇಳಿ ಅವರನ್ನು ಸದಾ ಉದ್ಧಾರ ಮಾಡಲು ಕಾದು ಕುಳಿತ ಮಹಾಶಕ್ತಿ ಚಲುವೆಯೋ? ಈ ಸಂದೇಹವನ್ನು ಪರಿಹರಿಸಿಕೊಳ್ಳುವುದಕ್ಕಾಗಿ ಅವರು ತಮ್ಮ ಜೀವನವನ್ನೇ ಪ್ರಯೋಗಶಾಲೆಯನ್ನಾಗಿ ಮಾಡಿದರು. ಆ ನಿಟ್ಟಿನಲ್ಲಿ ತಮ್ಮ ದೇಹ ದಂಡಿಸಿ ಕಾಯಕ ಮಾಡತೊಡಗಿದರು" ಹೀಗೆ ಅನನ್ಯ ಭಕ್ತಿಯಿಂದ ಕಾಳಿಕಾಂಬೆಯನ್ನು ಧ್ಯಾನಿಸ ಹತ್ತಿದರು. ಒಮ್ಮೆಯಾದರೂ ಆಕೆಯ ಮುಖವನ್ನು ಈ ಕಣ್ಣಿನಲ್ಲಿ ಕಾಣಲೇ ಬೇಕೆಂಬ ಭಕ್ತಿಯ ಛಲ ಅವರಲ್ಲಿ ಮೈದೋರಿತು. ಅಂದಿನಿಂದ ವಿಶೇಷ ಭಕ್ತಿಯಿಂದ ಪೂಜೆ ಪುನಸ್ಕಾರಗಳಿಂದ ಕಾಳಿಯನ್ನು ಸ್ಮರಿಸ ಹತ್ತಿದರು. ಆದರೆ ಅವರಿಗೆ ಎಷ್ಟು ದಿನಗಳಾದರೂ ದೇವಿಯ ದರುಶನ ದೊರೆಯಲಿಲ್ಲ. ಹೀಗೆ ಒಂದೊಂದು ದಿನ ಉರುಳಿದಾಗಲೂ ತನ್ನ ಆಯುಷ್ಯದಲ್ಲಿ ದೇವಿಯನ್ನು ಕಾಣದೇ ಈ ಒಂದು ದಿನ ವ್ಯರ್ಥವಾಯಿತಲ್ಲ ಎಂದು ಚಿಂತಿಸುತ್ತಿದ್ದರು

ಒಮ್ಮೆ ಅವರು ದೇವಿಯ ದರುಶನವನ್ನು ಪಡೆಯಲಾರದ ಈ ದೇಹ ಇದ್ದು ಫಲವೇನು ಎಂದು ತೀರ್ಮಾನಿಸಿ ಕಾಳಿಕಾಂಬೆಯ ಕೈಯಲ್ಲಿದ್ದ ಆಯುಧವನ್ನು ತೆಗೆದುಕೊಂಡು ತಮ್ಮ ಕತ್ತನ್ನು ಕತ್ತರಿಸಿಕೊಳ್ಳಲು ಭರದಿಂದ ಮೇಲೆತ್ತಿದರು. ಕತ್ತಿ ಕೆಳಬಾರದೇ ಹಾಗೇ ಉಳಿಯಿತು. ವಿಸ್ಮಿತರಾಗಿ ದೇವಿಯತ್ತ ನೋಡುತ್ತಾರೆ – ಸಾಕ್ಷಾತ್ ಜಗನ್ಮಾತೆ ಕಾಳಿಕಾ ದೇವಿ ಭಕ್ತನ ಈ ಕಠೋರ ಭಕ್ತಿಗೆ ಪ್ರಸನ್ನಳಾಗಿ ಹಸನ್ಮುಖಳಾಗಿ ಹರಸುತ್ತ ತನ್ನ ನಿಜರೂಪವನ್ನು ತೋರಿ ನಿಂತಿದ್ದಾಳೆ. ಸಾಕ್ಷಾತ್ ಜಗನ್ಮಾತೆಯನ್ನು ಕಣ್ಣಾರೆ ಕಂಡ ರಾಮಕೃಷ್ಣರು ಸಂತೋಷಭರಿತರಾಗಿ, ಆನಂದ ತುಂದಿಲರಾಗಿ ಆಕೆಗೆ ಕೈ ಜೋಡಿಸಿ ಮೂಕರಾಗಿ ನಿಂತುಬಿಡುತ್ತಾರೆ. ಆಗ ಅವರ ಮನಸ್ಸಿನಲ್ಲಿ ಯಾವುದೋ ಬೆಳಕು ಸಂಚರಿಸಿದಂತಾಗುತ್ತದೆ. ಹಾಗೆಯೇ ಕಣ್ಮುಚ್ಚಿದಾಗ ತಮ್ಮ ದೇಹದೊಳಕ್ಕೆ ಮತ್ತಾವುದೋ ಒಂದು ಪ್ರಜ್ವಲ ಶಕ್ತಿ ಪ್ರವೇಶಿಸುತ್ತಿರುವಂತೆ ಭಾಸವಾಗುತ್ತದೆ. ಸುತ್ತಮುತ್ತ ಎಲ್ಲ ಕಡೆಯೂ ಅವರು ಜಗನ್ಮಾತೆಯನ್ನು ಕಾಣುತ್ತಿರುತ್ತಾರೆ.

ಅಂದಿನಿಂದ ಅವರಿಗೆ ಒಂದು ಸತ್ಯದ ಮಾತು ಸಾಕ್ಷಾತ್ಕಾರವಾದಂತಾಗಿ ಜಗತ್ತಿನ ಪ್ರತಿ ಜೀವರಾಶಿಗಳಲ್ಲೇ ಏಕೆ ಪ್ರತೀ ಅಣುವಿನಲ್ಲಿಯೂ ದೇವರಿದ್ದಾನೆ ಎಂದು ನಂಬುತ್ತಾರೆ. ಅದರಂತೆ ಆ ಭಕ್ತಿಯಲ್ಲಿಯೇ ಅವರು ಸದಾ ಮೈಮರೆಯತೊಡಗುತ್ತಾರೆ. ಪ್ರತಿಯೊಂದರಲ್ಲಿಯೂ, ಪ್ರತಿಯೊಬ್ಬರಲ್ಲಿಯೂ ಅವರು ದೇವರನ್ನು ಕಾಣುತ್ತಾರೆ. ಭಕ್ತಿಯಿಂದ ದೇವರನ್ನು ಸ್ಮರಿಸುತ್ತ ಭಕ್ತಿಯ ಅತ್ಯುನ್ನತ ಸ್ಥಳವಾದ ಸಮಾಧಿ ಸ್ಥಾನಕ್ಕೇರುತ್ತಾರೆ. ಆಗೆಲ್ಲಾ ಸದಾ ಪರಮಾತ್ಮನನ್ನು ಕಾಣುತ್ತ ತನ್ಮಯರಾಗಿಬಿಡುತ್ತಾರೆ.

ಎಲ್ಲೆಡೆಯೂ ದೇವರಿದ್ದಾನೆ ಎಂಬ ಸತ್ಯದ ಮಾತು ಸಾಕ್ಷಾತ್ಕಾರವಾದ ಮೇಲೆ ಅವರು ದೇವಿಯ ಪೂಜೆಯಲ್ಲಿ ನಿರಾಸಕ್ತಿ ತಾಳುತ್ತಾರೆ. ಜನರು ತಮ್ಮ ತೃಪ್ತಿಗಾಗಿ ಹೂವು, ನೇವೇದ್ಯ, ಪಟ್ಟೆ, ಬೆಳ್ಳಿ ಬಂಗಾರ ಇತ್ಯಾದಿಯಾಗಿ ದೇವಿಯನ್ನು ಅಲಂಕರಿಸುವ ರೀತಿಯನ್ನು ಕಂಡು ಜನರ ಮರುಳುತನವನ್ನು ಅರಿತು ನಗುತ್ತಾರೆ. ತನ್ನಲ್ಲಿಯೇ ದೇವರಿರುವುದನ್ನು ಕಂಡ ಮೇಲೆ ರಾಮಕೃಷ್ಣರು ಭಕ್ತಿಯಿಂದ ದೇವರನ್ನು ಸ್ಮರಿಸುತ್ತ ಗಂಟೆಗಟ್ಟಲೆ ಸಮಾಧಿ ಸ್ಥರದಲ್ಲಿ ಕುಳಿತುಬಿಡುತ್ತಾರೆ. ಆಗ ದೇವರೊಡನೆ ಮಾತನಾಡುತ್ತಾರೆ. ಅದರಂತೆ ತಮ್ಮ ತಲೆಯ ಮೇಲೆ ಹೂವುಗಳನ್ನು ಏರಿಸಿಕೊಂಡು ತಮಗೆ ತಾವೇ ಪೂಜಿಸಿಕೊಳ್ಳುತ್ತಾರೆ. ಇದನ್ನೆಲ್ಲ ನೋಡಿದ ಜನರು ದೇವಿಯ ಪೂಜೆಯು ನಿಂತು ಅಸ್ತವ್ಯಸ್ತವಾಗಿರುವುದನ್ನು ಗಮನಿಸಿ ರಾಮಕೃಷ್ಣರಿಗೆ ಹುಚ್ಚು ಹಿಡಿದಿದೆ ಎಂದೇ ತೀರ್ಮಾನಿಸುತ್ತಾರೆ. "ಸಾಮಾನ್ಯವಾಗಿ ಮನುಷ್ಯರು ಮತ್ತೊಬ್ಬರನ್ನು ಅಳೆಯುವ ರೀತಿಯೇ ಹೀಗೆ. ಯಾರು ತಮ್ಮಂತೆ ಇಲ್ಲವೋ ಅವರೆಲ್ಲ ಹುಚ್ಚರು. ತಮಗೆ ಮಾತ್ರ ಬುದ್ಧಿ ಸ್ಥಿಮಿತವಾಗಿದೆಯೆಂದು ಭಾವಿಸುವರು". ಅದರಂತೆ ಬಲಾತ್ಕಾರವಾಗಿ ಅವರನ್ನು ವೈದ್ಯರಿಗೆ ತೋರಿಸುತ್ತಾರೆ. ಆಗಲೂ ರಾಮಕೃಷ್ಣರು ವೈದ್ಯರ ಮುಖ ನೋಡಿ ಜನರ ಮುಖ ನೋಡಿ ನಗುತ್ತಾರೆ. ಪರಮಾತ್ಮನನ್ನು ಸದಾ ಕಾಣುವ, ಆತನೊಡನೆ ಮಾತನಾಡುವ, ಆತನಲ್ಲಿ ಐಕ್ಯವಾಗುವ ಭಕ್ತಿಗೆ
ಹುಚ್ಚು ಎನ್ನುವ ಸೀನೆಂತಹ ಪೆದ್ದರೊ
ತಾತ್ಸಾರದಿಂದ ನಗುತ್ತಾರೆ.

ಕಡೆಗೆ ತಾಯಿ ಚಂದ್ರಾದೇವಿಗೆ ರಾ
ಸ್ಥಿತಿ ತಿಳಿಯುತ್ತದೆ. ಮಗನ ಸ್ಥಿತಿ
ಅವನಿಗೆ ಮದುವೆ ಮಾಡಿದರೆ ಸರಿ ಹೋ
ದೆಂದು ತಿಳಿದು ಹೆಣ್ಣಿಗಾಗಿ ಹುಡುಕಾ
ಇವರ ಇಂಥ ಸ್ಥಿತಿ ಕಂಡು, ಜೊತೆಗೆ
ಕಾಡುತ್ತಿರುವ ಕಡುಬಡತನವನ್ನು ತಿಳಿ
ಯಾರೂ ಹೆಣ್ಣು ಕೊಡಲು ಮುಂದೆ ಬ
ಅಲ್ಲದೇ ಆಗಿನ ಕಾಲದಲ್ಲಿ ಹೆಣ್ಣಿಗೆ
ಯವರು ಇಂತಿಷ್ಟು ತೆರ ಎಂದು ಕನ್ಯಾ
ನೀಡಿ ಹೆಣ್ಣು ತಂದುಕೊಂಡು ಮದು
ಕೊಳ್ಳುವ ಪದ್ಧತಿ ಇದ್ದಿತು.
ಕೇಳುವ ಕನ್ಯಾಶುಲ್ಕವನ್ನು ಕೊಟ್ಟು ಅ
ಮಾನಕ್ಕೆ ತಕ್ಕಂತೆ ಮದುವೆ ಮಾಡಿಕೆ
ಇವರಿಗೆ ದುಸ್ತರವಾಗಿ, ಹೀಗೆ
ಪರಿತಪಿಸುತ್ತಿರುವಾಗ ರಾಮಕೃಷ್ಣರಿ
ಅಥವಾ ಬಿಡುತ್ತದೆ. ಅವರೇ 'ಜಯ
ಎಂಬ ಊರಿನಲ್ಲಿ ರಾಮಮುಖೋಪ
ಮನೆಯಲ್ಲಿರುವ ಕನ್ಯೆಯನ್ನು ಕೇಳಿ, ಅ
ಬೆಳೆಯುತ್ತಿರುವ ಫಲ' ಎಂದು ಸೂ
ರಾಮಕೃಷ್ಣ ಆಧ್ಯಾತ್ಮಿಕ ಜ್ಞಾನವನ್ನ
ಮುಖೋಪಾಧ್ಯಾಯರು ದೈವದ
ತಾಗಲೆಂದು ಸಮ್ಮತಿಸಿ ಒಪ್ಪಿಗೆ ನ
ಶಾರದಾ ದೇವಿಯೊಂದಿಗೆ ರಾಮಕೃಷ್ಣ
[illegible] ನೆರವೇರುತ್ತದೆ

ಆದರೆ ಹೆಂಡತಿಯನ್ನು ಇವರು
ಸಮಾನವೆಂದು ಭಾವಿಸುತ್ತಾರೆ
ಮನೋವೃತ್ತಿ ಬೆಳೆದು ಆಕೆಯ ಸೇ
ತೊಡಗುತ್ತಾರೆ. ಭೇದಭಾವ ತೆ
ರೊಡನೆ ಎಲ್ಲ ಮನೆಗಳಲ್ಲಿ ಭೋಜ
ತಮ್ಮ ಮನವನ್ನು ಶುಚಿಗೊಳಿಸಿಕೆ
ರಾಮಕೃಷ್ಣರಿಗೆ ಸಾಂಸಾರಿಕ ಜೀವ
ಲೌಕಿಕ ವ್ಯವಹಾರದಲ್ಲಾಗಲಿ ಆಸಕ್ತಿ
ದಿಲ್ಲ. ಆಧ್ಯಾತ್ಮಿಕ ದಾರಿಯಲ್ಲಿ,
ಕ್ಷೇತ್ರದಲ್ಲಿ ಸದಾ ಚಿಂತಿಸುತ್ತ
ಣೇಶ್ವರಕ್ಕೆ ತೆರಳುತ್ತಾರೆ. ಇಂಥ ಮಹ
ಆಧ್ಯಾತ್ಮಿಕ ಶಕ್ತಿಯನ್ನು ಸ್ವತಃ
ರಾಜ, ಮತ್ತು ರಾಣಿ ರಾಸಮಣಿದೇ
ಕಂಡು ಕೊಂಡಾಡಿ ಅವರ ಪಾದಗ
ತ್ತಾರೆ. ಈ ರೀತಿ ಭಕ್ತಿಯ ಪಕ್ವತೆಂ
ಸುಂದರ ಪುಷ್ಪ ರಾಮಕೃಷ್ಣರು.

ಇಂಥ ಸುಂದರ ಪುಷ್ಪದ ಮಧು
ಹೀರಿ ತೃಪ್ತರಾಗಲು ದುಂಬಿಗಳಂತೆ
ಅವರತ್ತ ಧಾವಿಸಿ ಬರತೊಡಗಿತು.
ಬಂದ ಶಿಷ್ಯರಲ್ಲಿ, ಇಲ್ಲಿ ಗುರುತಿ

ಗಳೆಂದರೆ–ನರೇಂದ್ರ (ಸ್ವಾಮಿ ವಿವೇಕಾ–, ಬ್ರಹ್ಮಾನಂದರು, ಅದ್ವೈತಾನಂದರು, ಶಾನಂದರು, ತ್ರಿಗುಣಾನಂದರು, ರಾನಂದರು, ಯೋಗಾನಂದರು, ರಾನಂದರು, ಸ್ವಾಮಿ ರಾಮಕೃಷ್ಣಾನಂದ ಲ್ಲೂಷಣ ಚಕ್ರವರ್ತಿ) ಶಿವಾನಂದರು, ಪ್ರಾನಂದರು. ತ್ರಿಗುಣಾತೀತಾನಂದರು, ೀಧಾನಂದರು, ವಿಜ್ಞಾನಾನಂದರು, ಧಾನಂದರು – ಹೀಗೆ ಒಬ್ಬರಲ್ಲ, ಇಬ್ಬರಲ್ಲ ರು–ಅನೇಕಾನೇಕರು ಇವರ ಕೃಪಾ ಕ್ಷೆಕ್ಕೆ ಪಾತ್ರರಾಗಿ ಧನ್ಯರಾಗಿದ್ದಾರೆ. ಇವರು ಗೆ ಹೇಳುತ್ತಿದ್ದ ಮಾತುಗಳು, ದೃಷ್ಟಾಂತ ಉಪದೇಶವಾಗುತ್ತಿದ್ದವು. ಸಾಧಾರಣವಾಗಿ, ವಾಗಿ ಅತಿ ಸುಲಲಿತವಾಗಿ ಪರಮಾತ್ಮನ ತನನ್ನು ಸ್ಮರಿಸಿ ಕೃತಾರ್ಥರಾಗುವ ಕುರಿತು ವಾಗಿ ಹೇಳುತ್ತಿದ್ದರು. 'ಯಾರು ಯಾವ ರೀತಿ ಾದರೂ ದೇವರನ್ನು ಕಾಣಬಹುದು. ಆದರೆ ಯೊಬ್ಬರೂ ದೇವರನ್ನು ಕಾಣಬೇಕಾದರೆ ವಲಿಗೆ ತಿಳಿಯಬೇಕಾದ್ದು–ನಾನು – ನನ್ನದು ುದು ಅಜ್ಞಾನ ; ನೀನು-ನಿನ್ನದು ಎಂಬುದು ನ. ಈ ಜ್ಞಾನದ ಬೆಳಕಿನಲ್ಲಿ ಮಾತ್ರ ವು ದೇವರನ್ನು ಕಾಣಬಹುದು. ನನ್ನ ಬಕ್ಕೆ ಒಂದು ಬಟ್ಟೆಯನ್ನು ಅಡ್ಡವಾಗಿ ದರೆ ನಾನು ಎಷ್ಟು ಹತ್ತಿರ ಇದ್ದರೂ ನನ್ನ ಖ ನಿಮಗೆ ಹೇಗೆ ಕಾಣಿಸುವುದಿಲ್ಲವೋ ಗೆಯೇ ದೇವರು ಮತ್ತು ಮನುಷ್ಯರ ನಡುವೆ ನು ತೆರೆ ಇರುತ್ತದೆ. ಮನುಷ್ಯ ನಾನು ಎಂಬ ಂಭಾವವನ್ನು ತೊರೆದಾಗ ದೇವರು ಮತ್ತು ್ಯ ನಡುವಿನ ತೆರೆ ಸರಿಯುತ್ತದೆ. ದೇವರು ಸುತ್ತಾನೆ' ಎಂದು ರಾಮಕೃಷ್ಣರು ತಮ್ಮ ್ಯರಿಗೆ ಹೇಳುತ್ತ ಈ ಸಂದರ್ಭಕ್ಕೆ ಒಂದು ುದರವಾದ ದೃಷ್ಟಾಂತವನ್ನು ಕೊಡುತ್ತಾರೆ. ರಾದಿ ವೀರನಾದರೂ ರಾಮಾಯಣದಲ್ಲಿ ುವ ಹನುಮಂತ ನಿಗರ್ವಿ. ವಿನಯಶಾಲಿ. ೋಕವನದಲ್ಲಿ ದುಃಖದಿಂದ ಕೊರಗುತ್ತಿದ್ದ ತಾದೇವಿಯನ್ನು ನೋಡಲು ಹೋದಾಗ ಶ್ರೀ ಮಚಂದ್ರನ ಸುದ್ದಿಯನ್ನು ಅವಳಿಗೆ ಹೇಳಿದನು. ಷ್ಟು ಬೇಗ ಶ್ರೀರಾಮಚಂದ್ರನು ಬಂದು ್ಯನ್ನು ಸೆರೆಯಿಂದ ಬಿಡಿಸುವನು ಎಂದು ್ಯರ್ಯ ಹೇಳುತ್ತಾನೆ. ಆದರೆ ಸೀತೆಗೆ ರಾಮನ ೆತೆಯಲ್ಲಿ ಬರುವವರ ಸಾಹಸದಲ್ಲಿ ನಂಬಿಕೆ ಇರ ಲ್ಲ. ಆಗ ಹನುಮಂತ ಆಕೆಗೆ, ಸುಗ್ರೀವನ ನ್ಯದಲ್ಲಿ ತಾನೇ ಕೊನೆಯವನೆಂದು ಹೇಳು ತ್ತನೆ. ವೀರಾಧಿವೀರನೂ, ಜಗಜ್ಜಟ್ಟಿಯೂ ಆದ ನುಮಂತ ಈ ರೀತಿ ಹೇಳಿಕೊಳ್ಳಬೇಕಾದರೆ ಆತ ನು ಎಂಬ ಅಹಂಕಾರದಿಂದ ಎಷ್ಟು ದೂರ ದಿದ್ದಾನೆ ಎಂಬುದನ್ನು ನಾವು ಅರಿತುಕೊಳ್ಳ ಬೇಕು. ಆನಂತರ ಸರ್ವಸ್ವವನ್ನೂ ಪರಮಾತ್ಮನಿಗಾಗಿ ಮೀಸಲಿರಿಸಿ ಅರ್ಪಿಸಿಕೊಳ್ಳಬೇಕು. ಎಲ್ಲರೂ ಆ ದಯಾಮಯನಾದ ಪರಮಾತ್ಮನೆಂಬ ಅಗೋಚರ ಶಕ್ತಿಯನ್ನು ನಾನಾ ರೂಪದಲ್ಲಿ ಕಾಣಲು ಶ್ರಮಿಸುತ್ತಾರೆ. ಅವರು ಯಾವ ಧರ್ಮವೇ ಇದ್ದರೂ ಆಯಾ ಧರ್ಮದ ಹಿಂದೆ ಇರುವುದೊಂದೇ 'ಸತ್ಯ' ಎಂಬುದು ಎಂದು ಹೇಳಿ ಸತ್ಯದೆಡೆಗೆ ಜನರ ಕಣ್ಣು ತೆರೆಸಿದ್ದಾರೆ.

ರಾಮಕೃಷ್ಣರು ತಮ್ಮ ಶಿಷ್ಯರೊಂದಿಗೆ ಮಾತಿಗೆ ಕುಳಿತಾಗ ಅವರು ದೇವರ ಬಗ್ಗೆ ದೀರ್ಘವಾದ ಚರ್ಚೆ ಮಾಡುತ್ತಿದ್ದರು. ಆಗ ಒಬ್ಬ ಶಿಷ್ಯ 'ಪರಮಾತ್ಮ ಇದ್ದಾನೆಯೇ ? ನಾನು ಅವನನ್ನು ನೋಡಬಹುದೇ ಆತನನ್ನು ಕಾಣುವ ಮಾರ್ಗ ಯಾವುದು ?' ಎಂದು ಕೇಳುತ್ತಾನೆ. ಆಗ ರಾಮಕೃಷ್ಣರು ಈ ರೀತಿ ಹೇಳುತ್ತಾರೆ. 'ದೇವರು ಖಂಡಿತಾ ಇದ್ದಾನೆ. ರಾತ್ರಿಯ ವೇಳೆಯಲ್ಲಿ ನಾವು ಆಕಾಶದಲ್ಲಿ ನಕ್ಷತ್ರಗಳನ್ನು ಕಾಣುತ್ತೇವೆ. ಸೂರ್ಯೋದಯವಾದ ಕೂಡಲೇ ಅವು ನಮಗೆ ಕಾಣಿಸುದಿಲ್ಲ. ಅಂದರೆ ಹಗಲು ನಕ್ಷತ್ರಗಳು ಇಲ್ಲವೆನ್ನುತ್ತೀರಾ? ಹಾಗೆ ದೇವರನ್ನು ಇಲ್ಲವೆನ್ನಬಾರದು. ಪರಿಶುದ್ಧ ಆತ್ಮದಿಂದ, ಅನನ್ಯ ಭಕ್ತಿಯಿಂದ ಪರಮಾತ್ಮನನ್ನು ಧ್ಯಾನಿಸಿದರೆ ಖಂಡಿತಾ ನೀನು ಆ ದಯಾಮಯನನ್ನು ಕಾಣಬಹುದು.'

'ಒಂದು ರೇಷ್ಮೆಯ ಹುಳು ತನ್ನ ಅನುಕೂಲಕ್ಕಾಗಿ ಅತಿ ನಾಜೂಕಾಗಿ ಗೂಡನ್ನು ನಿರ್ಮಿಸಿಕೊಂಡು ಒಳಗೆ ಸೇರಿಕೊಂಡಿರುತ್ತದೆ. ಅದಕ್ಕೆ ಹೊರಗೆ ಹೋಗಬೇಕೆಂಬ ಯೋಚನೆ ಬಂದರೂ ಆ ಗೂಡಿನೊಳಗಿನ ಸುಖದ ಮುಂದೆ ಮತ್ತಾವುದೂ ಅದಕ್ಕೆ ಬೇಕಾಗಿರುವುದಿಲ್ಲ. ಅಲ್ಲದೇ ತಾನೇ ನಿರ್ಮಿಸಿಕೊಂಡ ತನ್ನದೇ ಆದ ಈ ಸುಂದರ ಗೂಡನ್ನು ಕತ್ತರಿಸಿ ಹೊರಬರಲು ಎಷ್ಟು ಮಾತ್ರಕ್ಕೂ ಇಚ್ಛಿಸುವುದಿಲ್ಲ. ಆ ಗೂಡಿನ ಮೇಲೆ ಅದಕ್ಕೆ ಅಷ್ಟೊಂದು ವ್ಯಾಮೋಹ ಬೆಳೆದುಬಿಟ್ಟಿರುತ್ತದೆ. ಅದರ ಈ ರೀತಿಯ ಅತಿಯಾದ ವ್ಯಾಮೋಹವೇ ಕೊನೆಗೆ ಅದರ ಸಾವಿಗೆ ಕಾರಣವಾಗುತ್ತದೆ. ಇಂಥ ವ್ಯಾಮೋಹಕ್ಕೆ ಅದು ಒಳಗಾಗದೇ ಗೂಡನ್ನು ಕತ್ತರಿಸಿ ಹೊರಬಂದಿದ್ದರೆ ಬದುಕಿ ಉಳಿಯಬಹುದಾಗಿತ್ತು. ಹೀಗೆ ಮನುಷ್ಯನೂ ಕೂಡ ಯಾವುದೇ ವ್ಯಾಮೋಹಕ್ಕೆ ಬಲಿಬೀಳದೆ ಆತ್ಮ ಪರಿಶುದ್ಧತೆಯಿಂದ ದೇವರನ್ನು ಸ್ಮರಿಸಿದಾಗ ಖಂಡಿತ ದೇವರು ಕಾಣುತ್ತಾನೆ. ಮುಕ್ತಿ ನೀಡುತ್ತಾನೆ.' ಎಂದು ರಾಮಕೃಷ್ಣರು ಹೇಳುತ್ತಾರೆ.

'ನಾನು ಎಷ್ಟು ಭಕ್ತಿಯಿಂದ ಸ್ಮರಿಸಿದರೂ ದೇವರು ಪ್ರತ್ಯಕ್ಷಗೊಳ್ಳುತ್ತಿಲ್ಲ. ಭಕ್ತಿ ಎಂದರೆ ಹೇಗಿರಬೇಕು. ಭಕ್ತಿಯ ಯಾವ ಸ್ಥಳದಲ್ಲಿ ನಾವು ದೇವರನು ಕಾಣಬಹುದು?' ಎಂದು ಮತ್ತೊ ಶಿಷ್ಯ ರಾಮಕೃಷ್ಣರನು ಪ್ರಶ್ನಿಸುತ್ತಾನೆ. ಕೆಲವೊತ್ತು ಕಣ್ಮುಚ್ಚಿ ಕುಳಿತ ರಾಮಕೃಷ್ಣ ಮತ್ತ ಶಾಂತಚಿತ್ತದಿಂದ ಕಣ್ತೆರೆದು ಆ ಶಿಷ್ಯ ನೋಡಿದರು. 'ಬಾ ನಿನಗೆ ದೇವರನ್ನು ತೆ ಸುತ್ತೇನೆ' ಎಂದು ಒಂದು ಹೊಳೆಯ ಹತ್ತಿರ ಕೊಂಡು ಹೋದರು. ಎದೆಯ ಮಟ್ಟದ ನೀರು ಬರುವಂತೆ ಶಿಷ್ಯನನ್ನು ನಿಲ್ಲಿಸಿ 'ಭಕ್ತಿಯಿಂದ ದೇವರನ್ನು ಸ್ಮರಿಸು. ಭ ಹೊರತು ಮತ್ತಾವುದೂ ನಿನ್ನಲ್ಲಿ ಇರಕೂ ಎಂದು ಹೇಳಿದರು. ಆತ ಕಣ್ಮುಚ್ಚಿ ದೇವ ಸ್ಮರಿಸತೊಡಗಿದ. ಆಗ ರಾಮಕೃಷ್ಣರು ತಲೆಯನ್ನು ನೀರಿನಲ್ಲಿ ಪೂರ್ಣವಾಗಿ ಮು ವಂತೆ ಬಲವಾಗಿ ಒತ್ತಿ ಹಿಡಿದರು. ಕೆಲಹೊ ಕಳೆದ ಕೂಡಲೇ ಶಿಷ್ಯ ನೀರಿನಿಂದ ಮೇಲೆ ಪ್ರಯತ್ನಿಸತೊಡಗಿದ. ಆದರೆ ಇವರು ಅವ ನೀರಿನಿಂದ ಮೇಲೆ ಬರದಂತೆ ಮತ್ತಷ್ಟು ಬ ಒತ್ತಿ ಹಿಡಿದರು. ನೀರಿನಲ್ಲಿ ಮುಳುಗಿದ್ದ ಉಸಿರುಕಟ್ಟಿ ತಾಳಲಾರದೆ ತನ್ನೆಲ್ಲಾ ಶಕ್ತಿ ಉಪಯೋಗಿಸಿ ಕೊಸರಿಕೊಂಡು ಮೇಲೆ ಬಿಟ್ಟ. ಆಗ ರಾಮಕೃಷ್ಣರು ದೇವರನ್ನು ಕಂ ಎಂದು ಆತನನ್ನು ಕೇಳುತ್ತಾರೆ. ಇಲ್ಲವೆ ಶಿಷ್ಯ ತಲೆ ಆಡಿಸುತ್ತಾನೆ. ಇವರು ನ ಹೀಗೆ ಹೇಳುತ್ತಾರೆ 'ನಿನ್ನ ಪ್ರಾ ಅರ್ಥಾತ್ ನಿನ್ನ ಉಸಿರು ಮತ್ತು ಬದು ನೀನು ಎಷ್ಟು ಹೋರಾಟ ನಡೆಸಿ ಬಂದೆಯೋ ಅಷ್ಟೇ ಅಚಲ ಭಕ್ತಿಯಿಂದ ತ್ಮನನ್ನು ಸ್ಮರಿಸಿದರೆ, ಆಗ ಮಾತ್ರ ನೀನು ಖ ದೇವರನ್ನು ಕಾಣಬಲ್ಲೆ' ಎಂದು ಹೇಳಿ ಕಣ್ಣು ತೆರೆಸುತ್ತಾರೆ. ಭಕ್ತಿಯು ಪೂರ್ಣತೆ ರಿಗೆ ಸಲ್ಲುವವರೆಗೆ ದೇವರು ನಮಗೆ ಗೋ ಲಾರ, ಇದಕ್ಕೊಂದು ಕಥೆ ಹೇಳುವರು ಕೆ

'ಒಬ್ಬ ರೇಷ್ಮೆಯ ಶಾಲು ಮಾರುವ ವ ಸಂತೆಯಲ್ಲಿ ಕುಳಿತು ಶಾಲು ಒಂದಕ್ಕೆ ನೂರು ರೂಪಾಯಿ ಎಂದು ಬೆಲೆ ಹೇಳ ಕೊಳ್ಳುವ ವ್ಯಕ್ತಿ ಸಾಕಷ್ಟು ಚೌಕಾಸಿ ಕೇಳುತ್ತಾನೆ. ಆತ ಕೊಡುವುದಿಲ್ಲ. ರೇಷ್ಮೆಯ ಶಾಲು ಕೊಳ್ಳಲೇಬೇಕೆಂಬ ಬಹಳವಾಗಿರುತ್ತದೆ. 98 ರೂಪಾಯಿಗೆ, 99 ರೂಪಾಯಿಗೆ ಶಾಲನ್ನು ಕೊಡುವ ದರೂ ಆತ ಶಾಲನ್ನು ಕೊಡಲು ಸುತ್ತಾನೆ. ಕಡೆಗೆ ವಿಧಿ ಇಲ್ಲದೇ ಈ ಪೂರ್ಣ ಬೆಲೆ ಒಂದುನೂರು ರೂಪಾಯ ತೆತ್ತು ಶಾಲನ್ನು ಪಡೆಯುತ್ತಾನೆ. ಭಕ್ತಿಯ ಪೂರ್ಣ ಬೆಲೆ ತೆರುವವರೆಗೂ ರನ್ನು ಕಾಣಲು ನಮಗೆ ಸಾಧ್ಯವಾ ಎಂದು ಹೇಳಿ ತಮ್ಮ ಶಿಷ್ಯರಿಗೆ ಮತ್ತು



ಶ್ರೀಮಾತೆ ಶಾರದಾದೇವಿ

ಭಕ್ತಿಯ ಮಹತಿಯನ್ನು ಬಹು ನಯವಾಗಿ ಕಥೆಯ ರೂಪದಲ್ಲಿ ತಿಳಿಸುತ್ತಾರೆ.

ರಾಮಕೃಷ್ಣರು ಭಕ್ತಿ ಮತ್ತು ಕರ್ಮಕ್ಕೆ ಹೆಚ್ಚು ಪ್ರಾಶಸ್ತ್ಯ ಕೊಡುತ್ತಿದ್ದರು. ಆದರೆ ಅವರ ಭಕ್ತಿಯ ಹಿನ್ನೆಲೆಯಾಗಿ ಯಾವಾಗಲೂ ಜ್ಞಾನವಿರುತ್ತಿತ್ತು. ಸ್ವಾಮಿ ವಿವೇಕಾನಂದರೇ ತಮ್ಮ ಗುರು ರಾಮಕೃಷ್ಣರನ್ನು ಕುರಿತು "ರಾಮಕೃಷ್ಣರು ಹೊರ ನೋಟಕ್ಕೆ ಭಕ್ತರು. ಒಳಗೆ ಜ್ಞಾನಿಗಳು. ಭಕ್ತಿಯಷ್ಟೇ ಶ್ರದ್ಧೆಯನ್ನು ಅವರು ಕರ್ಮಯೋಗಕ್ಕೂ ಕೊಟ್ಟಿದ್ದರು" ಎಂದಿದ್ದಾರೆ. ಈ ರೀತಿ ರಾಮಕೃಷ್ಣರು ಎಲ್ಲ ಸಾಧನೆಯನ್ನು ಮಾಡಿ ಸಿದ್ಧಿ ಎಂಬ ಅಮೃತವನ್ನು ತಮ್ಮ ಹೃದಯದಲ್ಲಿ ಶೇಖರಿಸಿಟ್ಟುಕೊಂಡರು. 'ಆದರೆ ಆ ಅಮೃತವನ್ನು ತಾವು ಮಾತ್ರ ಸವಿದು ಧನ್ಯರಾಗಬಯಸಲಿಲ್ಲ. ಜಗದ ಕಷ್ಟನಷ್ಟಗಳಲ್ಲಿ ಸಿಕ್ಕಿ ನೊಂದವರಿಗೆಲ್ಲಾ ಅದನ್ನು ಹಂಚಿ ಅವರನ್ನೂ ಸುಖಿಗಳನ್ನಾಗಿ ಮಾಡಬಯಸಿದರು'.

ಭಕ್ತಿ ಮತ್ತು ಕರ್ಮದ ಜೊತೆಗೆ ವಿವೇಕವೂ ಅತ್ಯಂತ ಮುಖ್ಯವಾದದ್ದು. ಕೆಲವೊಮ್ಮೆ ಪ್ರಾಪಂಚಿಕ ವ್ಯವಹಾರದಲ್ಲಿ ವಿವೇಕದಿಂದ ವರ್ತಿಸಿ ದೇವರನ್ನು ಕಾಣಬಹುದು ಎಂಬ ಮಾತನ್ನು ರಾಮಕೃಷ್ಣರು ಒತ್ತಿ ಹೇಳುತ್ತ ಒಂದು ಸುಂದರ ದೃಷ್ಟಾಂತವನ್ನು ಕೊಡುತ್ತಾರೆ.

'ಇಬ್ಬರು ಗುರುಶಿಷ್ಯರು ಇರುತ್ತಾರೆ. ಶಿಷ್ಯನಿಗೆ ಗುರು 'ದೇವರು ಸರ್ವವ್ಯಾಪಿ, ಎಲ್ಲರಲ್ಲಿ, ಎಲ್ಲದರಲ್ಲಿಯೂ ದೇವರಿದ್ದಾನೆ, ವಿವೇಕದಿಂದ ಅದನ್ನು ಅರಿತು ನಡೆದುಕೊಂಡು ಭಕ್ತಿಯಿಂದ ಸ್ಮರಿಸಿದರೆ ದೇವರು ಖಂಡಿತಾ ಒಲಿಯುತ್ತಾನೆ' ಎಂದು ಹೇಳಿರುತ್ತಾನೆ. ಹೀಗೇ ಇರಲು ಒಂದು ದಿನ ಶಿಷ್ಯ ಕಟ್ಟಿಗೆ ಸಂಗ್ರಹಿಸಲು ಕಾಡಿಗೆ ಹೋಗಿರುತ್ತಾನೆ. ದೇವರನ್ನು ಸ್ಮರಿಸುತ್ತ ತನ್ನ ಕಾಯಕದಲ್ಲಿ ತೊಡಗಿರುತ್ತಾನೆ. ಆಗ ಇದ್ದಕ್ಕಿದ್ದಂತೆ ದೂರದಲ್ಲಿ ಒಂದು ಶಬ್ದ ಕೇಳಿ ಬರುತ್ತದೆ. "ಒಂದು ಮದ್ದಾನೆ ಹುಚ್ಚೆದ್ದು ಓಡಿ ಬರುತ್ತಿದೆ. ಯಾರಾದರೂ ಇದ್ದರೆ ದೂರ ಹೋಗಿ" ಎಂಬ ಶಬ್ದ ಈ ಶಿಷ್ಯನ ಕಿವಿಗೆ ಬೀಳುತ್ತವೆ. ಆದರೂ ಈತ ಅದನ್ನು ತಲೆಗೆ ಹಚ್ಚಿಕೊಳ್ಳದೆ ತನ್ನ ಕಾಯಕದಲ್ಲಿ ತೊಡಗುತ್ತಾನೆ. ಆನೆ ರಭಸವಾಗಿ ಓಡಿ ಇತ್ತಲೇ ಬರುತ್ತದೆ ಈ ಶಿಷ್ಯ ಭಕ್ತಿಯಿಂದ ಅದಕ್ಕೆ ಕೈ ಜೋಡಿಸಿ ದೇವರನ್ನು ಧ್ಯಾನಿಸುತ್ತ ಸುಮ್ಮನೆ ನಿಂತು ಬಿಡುತ್ತಾನೆ. ಅದರ ಮೇಲೆ ಕುಳಿತ ಮಾವುತ ಕೂಡ "ದೂರ ಓಡು, ಮರೆಯಾಗಿ ತಪ್ಪಿಸಿಕೋ" ಎಂದು ಕೂಗಿಕೊಂಡರೂ ಆತ ಕೇಳದೇ ನಿಶ್ಚಿಂತನಾಗಿ ಕೈ ಜೋಡಿಸಿ ನಿಂತೇ ಇರುತ್ತಾನೆ. ಆನೆ ಓಡಿ ಬರುತ್ತದೆ. ಇವನನ್ನು ತನ್ನ ಸೊಂಡಿಲಿನಿಂದ ಸುತ್ತಿ ಬೀಸಿ ದೂರ ಎಸೆದುಬಿಡುತ್ತದೆ. ಕೈ ಕಾಲು ತರಚಿ, ರಕ್ತ ಚಿಮ್ಮುತ್ತದೆ. ಪ್ರಜ್ಞೆ ತಪ್ಪಿ ಬೀಳುತ್ತಾನೆ.

'ಈ ಸುದ್ದಿ ಅವನ ಗುರುವಿಗೆ ತಿಳಿಯುತ್ತದೆ. ಅವರು ಓಡೋಡಿ ಬಂದು ಶಿಷ್ಯನಿಗೆ ಉಪಚರಿಸುತ್ತಾರೆ. ಎಚ್ಚರಗೊಂಡ ಶಿಷ್ಯ ತನ್ನ ಸ್ಥಿತಿಗೆ ತಾವೇ ಕಾರಣರೆಂದು ಹೇಳುತ್ತಾನೆ. "ದೇವರು ಸರ್ವವ್ಯಾಪಿ ಎಲ್ಲದರಲ್ಲಿ, ಎಲ್ಲರಲ್ಲಿಯೂ ದೇವರಿದ್ದಾನೆಂದು ತಾವು ಹೇಳಿದ್ದರಿಂದಲೇ ನಾನು ಆನೆಯಲ್ಲಿಯೂ ದೇವರಿದ್ದಾನೆಂದು ಭಾವಿಸಿ ಕೈ ಜೋಡಿಸಿ ನಿಂತೆ. ಈ ಕಷ್ಟಕ್ಕೆ ಸಿಲುಕಿದೆ" ಎಂದು ನಡೆದ ಎಲ್ಲ ಸಂಗತಿಯನ್ನೂ ಗುರುವಿಗೆ ಹೇಳುತ್ತಾನೆ.

'ಗುರು ಅವನ ಪೆದ್ದುತನಕ್ಕೆ ನಗುತ್ತಾರೆ. "ಅಯ್ಯೋ ಮರುಳೇ, ದೇವರು ಸರ್ವವ್ಯಾಪಿ ನಿಜ. ಆದರೆ ಮದ್ದಾನೆ ಹುಚ್ಚೆದ್ದು ಓಡಿ ಬರುತ್ತಿದೆ ದೂರ ಹೋಗಿ ಎಂದು ಕೂಗಿಕೊಂಡವನ ಮಾತನ್ನಾಗಲಿ ಸ್ವತಃ ಮಾವುತನೇ ದೂರ ಓಡು ತಪ್ಪಿಸಿಕೋ ಎಂದು ಹೇಳಿದ ಮಾತುಗಳನ್ನಾದರೂ ನೀನೇಕೆ ಕೇಳಲಿಲ್ಲ. ನೀನು ಆ ರೀತಿ ಆನೆಯಲ್ಲಿಯೂ ದೇವರಿದ್ದಾನೆ ಎಂದು ಭಾವಿಸಿದ್ದಾದರೆ, ಆನೆಯ ಮಾವುತನಲ್ಲಿಯೂ, ಮೊದಲೇ ಕೂಗಿಕೊಂಡ ಮನುಷ್ಯನಲ್ಲೂ ದೇವರಿದ್ದಾನೆಂದು ಏಕೆ ಅರಿತುಕೊಳ್ಳಲಿಲ್ಲ. ಈ ಪ್ರಾಪಂಚಿಕ ಬದುಕಿನಲ್ಲಿ ದೇವರನ್ನು ಕಾಣುವಾಗ ವಿವೇಕವೆಂಬುದು ಅತಿ ಮುಖ್ಯ ಎಂಬುದನ್ನು ನೀನೇಕೆ ಮರೆತೆ" ಎಂದು ಕೇಳುತ್ತಾರೆ. ಈ ರೀತಿ "ದೇವರು ಎಲ್ಲರಲ್ಲಿಯೂ ಇದ್ದಾನೆ. ಆದರೆ ಎಲ್ಲರೂ ದೇವರಲ್ಲಿ ಇಲ್ಲ. ಅದಕ್ಕೇ ಮಾನವನು ತೊಂದರೆಗೆ ಒಳಗಾಗುತ್ತಾನೆ." ಇದ್ದರಿಂದ ಭಕ್ತಿ ಮತ್ತು ಕಾಯಕದ ಜೊತೆಗೆ ವಿವೇಕವೂ ಅತಿ ಮುಖ್ಯ ಎ ರಾಮಕೃಷ್ಣರು ಈ ದೃಷ್ಟಾಂತದ ಮೂ ಮನಕ್ಕೆ ಮುಟ್ಟಿಸಿದ್ದಾರೆ. ಪರಮ ಕಾಣುವ ನಿಶ್ಚಲ ಭಕ್ತಿ, ಗುರುವಿನ ಮೇಲೆ ಅಚಲವಾದ ಆತ್ಮವಿಶ್ವಾಸ, ಅ ಶ್ರದ್ಧೆ ಇದ್ದಾಗ ಎಂತಹ ಆಪತ್ತು ಬಂ ಬಹುದು ಎಂದು ರಾಮಕೃಷ್ಣರು ತಮ್ಮ ಹೇಳುವ ಈ ನಿದರ್ಶನವನ್ನು ಕೇಳಿ.

'ಒಂದು ಊರಿನಲ್ಲಿ ಒಬ್ಬ ಗುರು ಇದ್ದ ಊರಿನ ದೇವಾಲಯದ ಪೂಜಾ ಕಾಯಕ ಮಾಡುತ್ತ ಹೊಟ್ಟೆ ಹೊರೆ ಅವನ ಮನೆಗೆ ಪಕ್ಕದ ಹಳ್ಳಿಯಿಂದ ಹೆಂ ದಿನವೂ ಮೊಸರು ಹಾಕುತ್ತಿದ್ದಳು. ಈ ಹಳ್ಳಿಗಳ ನಡುವೆ ಒಂದು ಹೊಳೆ ಹರಿ ಒಂದು ದಿನ ವಿಪರೀತ ಮಳೆ ಬಂದ ಹೊಳೆ ತುಂಬಿ ಹರಿಯುತ್ತಿದ್ದರಿಂದ ಅಂ ಆ ಗುರುವಿನ ಮನೆಗೆ ಮೊಸರು ಹಾಕಲ ಎರಡು ದಿನ ಬಿಟ್ಟ ಮೇಲೆ ಹೊಳೆಯಲ್ಲಿ ನೀರಿನ ಪ್ರಮಾಣ ಕಡಿಮೆ ಅಯಿತು ಆವಳು ಈ ಗುರುವಿನ ಮನೆಗೆ ಮೊಸರು ಬಂದಳು. ಆಗ ಗುರು, ಎರಡು ದಿನ ಬರಲಿಲ್ಲ ಎಂದು ಆ ಹೆಂಗಸನ್ನು ಕೇಳಿದ ತುಂಬಿ ಹರಿಯುತ್ತಿದ್ದರಿಂದ ಬರಲಾಗಲಿ ಆ ಹೆಂಗಸು ಉತ್ತರಿಸಿದಳು. ಆಗ ನಕ್ಕರು "ದೇವರನ್ನು ಸ್ಮರಿಸಿ ಭವಸ ದಾಟಬಹುದು. ನೀನು ಈ ಸಣ್ಣ ನೀರಿಗೆ ಹೆದರಿ ಕುಳಿತುಕೊಳ್ಳುವುದೇ' ಮೂದಲಿಸಿದರು. ಇದರಿಂದ ಆಕೆಯ ತುಂಬ ಪರಿಣಾಮ ಉಂಟಾಯಿತು. ದೇವರಲ್ಲಿ ಆಕೆಗೆ ಅಂತರ್ಯದ ಭಕ್ತಿ ತೊಡಗಿತು.

ಹೀಗೆ ಕೆಲಕಾಲ ಕಳೆದಿರಲು ಒ ಭಯಂಕರವಾದ ಮಳೆ ಬಿತ್ತು. ಗಿಡ ಮುರಿದು ಬೀಳುವಂತಹ ಮಳೆ. ಎಲ್ಲ ನೀರೇ ನೀರು ಅಂದು ಹೊಳೆ ತುಂ ರಭಸವಾಗಿ ಹರಿಯುತ್ತಿತ್ತು. ಆದರೂ ಪ್ರತಿ ದಿನದಂತೆ ಸರಿ ಹೆಂಗಸು ಮೊಸರು ಗಡಿಗೆಯನ್ನು ಗುರುವಿನ ಮನೆಗೆ ಬಂದಳು. ಇಂದು ಹೆ ಹರಿಯುತ್ತಿರುವುದರಿಂದ ಇವಳು ವೆಂದೇ ತಿಳಿದಿದ್ದ ಗುರುವಿಗೆ ಅಚ್ಚರಿಯ ಹರಿವ ಹೊಳೆಯನ್ನು ದಾಟಿ ಹೇಗೆ ಬ ಕೇಳಿದರು. ಅವಳು ಹಸನ್ಮುಖಳಾ ಹೇಳಿದ್ದಿರಲ್ಲ—ದೇವರನ್ನು ಭಕ್ತಿಯಿಂದ ಭವಸಾಗರವನ್ನೇ ದಾಟಬಹುದು ಎ

(28 ನೇ ಪು

## ಯುವವಾಣಿ

ಸ್ವಾರದಲಿ ಬಾಳು ವೈಶಾಲ್ಯದಿಂ ಬಾಳು" ಕಗ್ಗದ ಮಾತನ್ನು ಸಾರಿ ಇಹ ರಹಸ್ಯದಲಿ, ದಲಿ, ಜೀವನವನ್ನು ಸಮುಪಾಸನೆಯಾಗಿ ಮಾಡಿ ಕು, ಇಡೀ ನಾಡಿನ ಉತ್ಸಾಹಗಳಿಗೆ ತಮ್ಮ ಂಪನ್ನು ಬೀರಿ ಇಂದಿಗೆ ಹದಿಮೂರು ವರ್ಷದ ಗತಿಸಿಹೋದವರು ಡಾ॥ ಡಿ. ವಿ. ಗುಂಡಪ್ಪ. /ರ ಮಾರ್ಚ್ 17 ಕ್ಕೆ ತಮ್ಮ ಬಾಳಿನ ಶತ ೊತ್ಸವವನ್ನು ಕಾಣಬೇಕಿದ್ದ ಇವರು ಇಂದು ಮ್ಮೊಂದಿಗಿಲ್ಲ. ಆದರೆ ಇವರ ವಿಪುಲವಾದ ರಾಶಿ ನಮ್ಮೊಂದಿಗೆ ಬೆರೆತು ಬದುಕುತ್ತ ದೆಯೂ ನಿಲ್ಲುವ ಚಿರಂಜೀವತ್ವವನ್ನು ದಿದೆ.

ರ್ನಾಟಕ ರಾಜ್ಯದ ಮೊಡಕು ಮೂಲೆಯಾದ ಬಾಗಲಿನಲ್ಲಿ 1887 ರಲ್ಲಿ ಜನಿಸಿದವರು . ಜಿ. ವೈದಿಕ ಸಂಪ್ರದಾಯಸ್ಥರ ಕುಟುಂಬ ಹುಟ್ಟಿದ ಇವರಿಗೆ ಬಾಲ್ಯದಲ್ಲೇ ಶಾಸ್ತ್ರನಿಷ್ಠೆ ತ್ತವಾಗಿ ಅವರ ಸಾಹಿತ್ಯ ರಾಶಿಯಲ್ಲಿ ಂದು ಕಾಣುವ ಆರ್ಷೇಯ ಧ್ವನಿ ಕ್ತಿಗೆ ಕಾರಣವಾಗಿದೆ. ತಮ್ಮ ಜೀವನ ತಾತ್ತ್ವಿಕ ಚಿಂತನೆಗಳನ್ನು ಸಾಹಿತ್ಯ ನಿಯ ಮೂಲಕ ಹರಿಸಿರುವುದು ಅವರ ಡಿತ್ಯ ಪ್ರಜ್ಞೆಯ ದ್ಯೋತಕವಾಗಿದೆ. ಇಂತಹ ವ್ಯಕ್ತಿ ಒಂದು ಸಂಸ್ಥೆಯಲ್ಲದೆ ಮತ್ತೇನು! ವಿ. ಜಿ.ಯವರು ಕೇವಲ ಸಾಹಿತ್ಯ ಕ್ಷೇತ್ರದಲ್ಲಿ ತ್ರವಲ್ಲದೆ ರಾಜಕೀಯ, ಸಾಮಾಜಿಕ, ಪತ್ರಿ ದ್ಯಮದಂತಹ ಹಲವಾರು ಕಾರ್ಯ ರಂಗ ಲ್ಲಿ ದುಡಿದು ವಿಶಾಲವಾದ ಬದುಕನ್ನು ನಡೆಸಿ ರೂ ಆಗಿದ್ದಾರೆ

ಮೇಧಾವಿ, ಪತ್ರಿಕೋದ್ಯಮಿ, ಮೈಸೂರು ಪನ ಪರಿಷತ್ತಿನ ಸದಸ್ಯ, ಕೇಂದ್ರ ಸಾಹಿತ್ಯ ಾಡಮಿ ಸನ್ಮಾನಿತ, ಅಖಿಲ ಕರ್ನಾಟಕ ವೃತ್ತ ಕಾರ್ತರ ಸಮ್ಮೇಳನದ ಅಧ್ಯಕ್ಷ, ಕನ್ನಡ ಹಿತ್ಯ ಸಮ್ಮೇಳನದ ಅಧ್ಯಕ್ಷ–ಹೀಗೆ ಹತ್ತಾರು ರವಗಳು ಪ್ರಶಸ್ತಿಗಳು ಡಿ. ವಿ. ಜಿ. ಯವರಿಗೆ ದಿವೆ ಕನ್ನಡದ ಬಗೆಗಿನ ಮಾತು 'ವ್ಯಕ್ತಿ'ಗೆ ್ವಯವಾಗುವುದಾದರೆ ಅದು ಅವರಿಗೇ ್ವಯವಾಗಬೇಕು. ಜೀವನದ ಕಿಡಿಯಾಗಿ, ಲಾಗಿ, ನಕ್ಷತ್ರವಾಗಿ ಅಮೃತಬಿಂದುವಾಗಿ ್ಮಲ್ಲರ ದೊಡ್ಡ ಆಸೆಯಾಗಿ, ಗುಂಡಪ್ಪನವರು ಳಿಹೋಗಿದ್ದಾರೆ. ಸಾಹಿತ್ಯ ಜಗತ್ತಿನ ಮಾನವೀಯತೆಯ ವಿರಾಟ್ ಸ್ವರೂಪವನ್ನು ಈ ಮಹಾನ್ ವ್ಯಕ್ತಿತ್ವ ನಮಗೆ ತೋರಿಸಿಕೊಟ್ಟಿದೆ. ಇದರಲ್ಲಿ ಅಚ್ಚರಿಯೇನೂ ಇಲ್ಲ, ಜೊತೆಗೇ ಔಚಿತ್ಯ ಪೂರ್ಣವೂ ಹೌದು.

ಸಾಹಿತ್ಯ ಗುಣವು ಮುಖ್ಯವಾಗಿ ಜನಜೀವನದ ಗುಣದ ಪ್ರತಿಫಲ ಎಂಬ ಮಾತು ಡಿ. ವಿ. ಜಿ. ಅವರಿಗೆ ಸಾರ್ಥಕವಾಗಿ ಅನ್ವಯವಾಗುವುದು. ವಸಂತ ಕುಸುಮಾಂಜಲಿಯ ಮೂಲಕವಾಗಿ ಸಾಹಿತ್ಯದ ವಸಂತವನು ಕಂಡ ಇವರು ಕಾವ್ಯ ಸ್ವಾರಸ್ಯದವರೆಗೆ ಜೀವನದ ವೈವಿಧ್ಯವನ್ನು ಸಾಹಿತ್ಯದಲ್ಲಿ ಕಂಡರಿಸಿದವರು. ಕನ್ನಡ ಕಾವ್ಯದ ನವಚೈತ್ರೋತ್ಸವದ ಮೊದಲದಿನಗಳಲ್ಲಿ ಕೊರಲೆತ್ತಿ ಹಾಡಿದ ಕೋಗಿಲೆಗಳಲ್ಲಿ ಗುಂಡಪ್ಪನವರೂ ಒಬ್ಬರು. (ಸಾಂಪ್ರದಾಯಿಕ ಶಾಸ್ತ್ರೀಯತೆಯಲ್ಲಿ ಹೊಸ ವಸ್ತು ವಿನ್ಯಾಸವಿತ್ತು ಎಂದು ಹೇಳಬೇಕು.)



# ಡಾ॥ ಡಿ. ವಿ. ಗುಂಡಪ್ಪ

ಕಾವ್ಯ, ನಾಟಕ, ವಿಚಾರ ಸಾಹಿತ್ಯ, ಜೀವನ ಚರಿತ್ರೆ, ಅನುವಾದಗಳ ಮೂಲಕ ಸಾಹಿತ್ಯ ಮೃದಂಗವನ್ನು ತಮ್ಮ ಲೇಖನಿಪಲ್ಲವದಿಂದ ಬಾಜಿಸಿದರು. ಜೀವನ ಶ್ರದ್ಧೆಯೇ ಸಾಹಿತ್ಯ ಶ್ರದ್ಧೆಯಾಗಿ ಪರಿಣಮಿಸಿದ್ದು ಇವರ ಸಾಹಿತ್ಯ ಕೃತಿಗಳ ಮೂಲಕ ಕಾಣಬಹುದು. ಇವರ 'ಜೀವನ ಸೌಂದರ್ಯ ಮತ್ತು ಸಾಹಿತ್ಯ' ಹಾಗೂ 'ಸಾಹಿತ್ಯ ಶಕ್ತಿ' ಗಳು ಇವರಿಗಿದ್ದ ಸಾಹಿತ್ಯ ವಿಮರ್ಶೆಯ ಪರಿಪಕ್ವತೆಗೊಂದು ನಿದರ್ಶನ

ಮಂಕುತಿಮ್ಮನ ಕಗ್ಗದ ಹೆಸರನ್ನು ಕೇಳರಿಯದ ಕನ್ನಡಿಗರು ಯಾರೂ ಇರಲಾರರು. ಇಂತಹ ಕೃತಿಯೊಂದಕ್ಕೆ ದೊರೆಯಬೇಕಿದ್ದ ಪ್ರಶಸ್ತಿ ಕಾಲವಶದಿಂದ ತಪ್ಪಿಹೋಗಿ ಸ್ಪರ್ಧೆಯ ತುದಿಯಲ್ಲಿದ್ದ ಎರಡು ಕೃತಿಗಳಿಗೂ ಬರದೆ ಮೂರನೇ ಕೃತಿಗೆ ಪುರಸ್ಕಾರ ಸಿಕ್ಕಿದ್ದು ವಿಪರ್ಯಾಸ. ಕಾರಣ ಶಿಖರ ಸ್ಪರ್ಧೆಯ ಕೃತಿ ಪರಿಶೀಲಕರಿಗೆ ಸಲ್ಲುತ್ತಿದ್ದ ಸಂಭಾವನೆಯ ಕಿರಿಯ ಮೊತ್ತ. ಆದರೆ ಇಂತಹ ವಿಪರ್ಯಾಸಗಳಿಂದ ತಲೆ ಕೆಡಿಸಿಕೊಳ್ಳದೆ ಸ್ವಕ್ಕೆ ತಾವು ಸಾಹಿತ್ಯಸೇವೆಯಲ್ಲಿ ತೊಡ ಅವರ ದೊಡ್ಡತನ. ಎಂತಲೇ ಮರುಳ ಯನ ಕಗ್ಗವೆಂಬ ಕಗ್ಗದ ಮುಂದುವರಿದ ಸಾರವು ನಮಗೆ ಅವರಿಂದ ದೊರೆತಿದೆ.

"ಡಿ. ವಿ. ಜಿ. ಅವರು ಬದುಕಿದ್ದಾಗ ಸನ್ಮಾನಗಳಿಗೂ ಒಪ್ಪದ ವ್ಯಕ್ತಿಯಾ ಎಂಬ ಮಾತು ಅವರನ್ನು ಹತ್ತಿರದಿಂದ ಗೋಖಲೆ ಸಾರ್ವಜನಿಕ ಸಂಸ್ಥೆಯ ರೊಬ್ಬರು ಹೇಳಿದ ಮಾತು, ಈ ಮೇಲಿನ ಘ ಹಿನ್ನೆಲೆಯಲ್ಲಿ ಸತ್ಯವೆಂ ಅರಿವಾಗ (ವನಸುಮವೆಂಬ ಅವರ ಕವನ ಈ ಭಾ ಯಶಸ್ವಿಯಾಗಿ ಬಿಂಬಿಸುತ್ತದೆ ಎನ್ನಬ ತಾವೇ ಕಟ್ಟಿ ಬೆಳೆಸಿದ ಸಾರ್ವಜನಿಕ ಸಂಸ್ಥೆ ಬೆಂಗಳೂರಿನಲ್ಲಿರುವ ಈ ಸಂಸ್ಥೆಯು ಡಿ. ಯವರು ಬದುಕಿನ ಸಾಧನೆಯನು ತಿಳಿ ಅವರ ಕೃತಿ ಸಾಧನೆಗಳನ್ನು ಇಂದು ದಾಖ

ಶ್ರೀ ಕೂ.ರ. ನರಸಿಂಹನ್

ಡಿ.ವಿ.ಜಿ. ಅವರ ಶತಮಾನೋತ್ಸವವನ್ನು ಮಾರ್ಚ್ ತಿಂಗಳಿನಿಂದ ಒಂದು ವರ್ಷಕಾಲ ಕರ್ನಾಟಕದಲ್ಲಿ ಆಚರಿಸಲಾಗುತ್ತದೆ. ಸರಳರೂ ಸಾತ್ತ್ವಿಕರೂ ಆಗಿ ಪತ್ರಿಕೋದ್ಯಮಿ, ರಾಜಕಾರಣ ಚಿಂತಕ, ಕವಿ, ಅನುವಾದಕ, ಸಮಾಜಸೇವಕ, ಆಗಿ ನಾನಾ ರೀತಿಯ ತುಂಬು ಜೀವನವನ್ನು ನಡೆಸಿದ ಡಿ.ವಿ.ಜಿ. ಅವರು ಧರ್ಮವನ್ನು ವೈಯಕ್ತಿಕ ಅನುಭವಕ್ಕೆ ಸೀಮಿತಗೊಳಿಸದೆ ರಾಷ್ಟ್ರ ಜೀವನಕ್ಕೂ ಹಬ್ಬಿಸಬೇಕೆಂದು ಬಯಸಿ ಬರೆದವರು. ಇಂದಿನ ಯುವಕರಿಗೆ ಆದರ್ಶ ಆಗಬಹುದಾದ ಜೀವನ ಅವರದು. ಅವರ ನೆನಪಿನಲ್ಲಿ ಈ ಲೇಖನ. ಸಂ॥

ಪಡೆಯಬೇಕೆಂಬ ಕಾಣುವ ಹಂಬಲವುಳ್ಳವರು ಇಂತಹ ಗಣಿಯನ್ನು ಉಪಯೋಗಿಸಿ ಕೊಳ್ಳಬಹುದಾಗಿದೆ

ವಿಶ್ವಸಾಹಿತ್ಯದ ಮಟ್ಟ, ಏರಬಹುದಾದ ಕೃತಿಯಾಗಿ ಒಮರ ಉಮರನ ಉಸಗೆ ಪ್ರಸಿದ್ಧಿ ಪಡೆದಿದೆ ಇದು ಫಿಟ್ಸ್ ಜೆರಾಲ್ಡನ ಇಂಗ್ಲೀಷ್ ಕೃತಿಯನ್ನು ಅನುಸರಿಸಿ ಭಾಷಾಂತರವಾದದ್ದು. ಉಮರ್ ಖಯ್ಯಾಮನ ರುಬಯಿಯಾತ್‌ಗಳನ್ನು ಫಿಟ್ಸ್ ಜೆರಾಲ್ಡ್ ಅತಿ ಉನ್ನತ ರೀತಿಯಲ್ಲಿ ಅನುವಾದ ಮಾಡಿರುವನೆನ್ನುವುದು ಲೋಕ ಹೊಗಳಿರುವ ಸಂಗತಿಯಾಗಿದ್ದು, ಅದನ್ನು ಅನುಸರಿಸಿ ಹುಟ್ಟಿದ ಈ ಕನ್ನಡದ ಉಸಗೆ ಆಂಗ್ಲ ಮೂಲಕ್ಕೆ ಅತಿಹತ್ತಿರದ ಭಾಷಾಂತರವಾಗಿದೆಯೆನ್ನಬಹುದು.

ಷೇಕ್ಸ್‌ಪಿಯರ್ ಜಗತ್ಸಾಹಿತ್ಯದಲ್ಲಿ ಅಗ್ರಮಾನ್ಯ ಕವಿ, ನಾಟಕಕಾರ. ಇವನ ನಾಟಕಗಳಲ್ಲಿ ಮ್ಯಾಕ್‌ಬೆತ್ ಕೆಲವೇ ಶ್ರೇಷ್ಠ ನಾಟಕಗಳ ಗುಂಪಿಗೆ ಸೇರುವಂಥದು. ಇಂತಹ ನಾಟಕವನ್ನು ಕನ್ನಡಕ್ಕೆ ತಂದು ಕೊಟ್ಟಿರುವುದು ಡಿ. ವಿ. ಜಿ. ಅವರ ಅನುವಾದ ನೈಪುಣ್ಯಕ್ಕೆ ಮತ್ತೊಂದು ಉದಾಹರಣೆಯೆನ್ನಬಹುದು (ಉಮರನ ಒಸಗೆಯ ಬಗ್ಗೆ ಮೇಲೆ ಹೇಳಿದೆ.)

ಮನುಷ್ಯನ ಬದುಕು ತಾತ್ತ್ವಿಕತೆಯ ಆಗರವೂ ಆಗಿದೆ. ಅದರಲ್ಲಿಯೂ ಭಾರತೀಯರ ಜೀವನವು ಇಂತಹ ಶ್ರದ್ಧೆಯ ನಿರಂತರ ಸ್ತೋತ್ರವಾಗಿದೆ ಇದಕ್ಕೆ ಸಾಹಿತ್ಯರೂಪವನ್ನು ನೀಡಿ ಆಸ್ವಾದಯುತವಾದ ಗುಣವನ್ನು ನೀಡಿರುವ ಕೃತಿಗಳ ರಚನೆ ಮಾಡಿದ್ದಾರೆ ಗುಂಡಪ್ಪನವರು. ಇಂತಹ ಕೃತಿಗಳಲ್ಲಿ ಒಂದಾದ ಶ್ರೀಮದ್ಭಗವದ್ಗೀತಾ ತಾತ್ಪರ್ಯಕ್ಕೆ ಕೇಂದ್ರ ಸಾಹಿತ್ಯ ಅಕಾಡೆಮಿಯ ಪುರಸ್ಕಾರವೂ ದೊರೆತಿದೆ. (1967–68) ಇವರ ಶ್ರೀರಾಮಪರೀಕ್ಷಣಂ ತಾತ್ತ್ವಿಕ ಚಿಂತನೆಯ ಕಾವ್ಯವಾಗಿದೆ. ಶ್ರೀರಾಮಪರೀಕ್ಷಣಂ ಹಾಗೂ ಶ್ರೀಕೃಷ್ಣ ಪರೀಕ್ಷಣಂಗಳು ಗೀತರೂಪಕಗಳೂ ಆಗಿ ಪ್ರಸಿದ್ಧಿ ಪಡೆದಿವೆ. ಸೌಂದರ್ಯಾನುಭವವು ಆತ್ಮೋತ್ಕರ್ಷಕ್ಕೆ ಸಾಧಕವೂ ಆಗುವುದೆಂಬುದನ್ನು ಇಲ್ಲಿ ಸಾರಿ ಹೇಳುತ್ತಾನೆ.

ಉಪನಿಷತ್ತುಗಳ ಅಧ್ಯಯನದಲ್ಲಿಯೂ ಶ್ರೀಯುತರ ವಿವೇಚನೆ ಆಳವಾದದ್ದೇ. ಅವರ ಈಶೋಪನಿಷತ್ತಿನ ವ್ಯಾಖ್ಯಾನವನ್ನು ಒಮ್ಮೆ ಓದಬೇಕು! ಪುರುಷಸೂಕ್ತದ ಜಟಿಲವಾದ ಗಹನವಾದ ವಿಚಾರವನ್ನು ಸರಳವಾಗಿ ಸಾರವತ್ತಾಗಿ ಹೇಳಲು ಅನುವಂಶಿಕವಾಗಿ ದೊರೆತ ಶಾಸ್ತ್ರನಿಷ್ಠ ಸಂಪ್ರದಾಯಸ್ಥರಾದ ಡಿ ವಿ. ಜಿ ಅವರಿಂದ ಮಾತ್ರ ಸಾಧ್ಯವೇನೋ! ಏಕೆಂದರೆ ಕಿರಿಯ ಪದ್ಯಗಳಲ್ಲಿ ಹಿರಿದಾದ ಅರ್ಥವನ್ನು ಅಡಗಿಸಿರುವ ಇಂತಹ ಕೃತಿ ಮತ್ತೊಂದು ದೊರೆಯಲಾರದು.

ಪತ್ರಿಕೋದ್ಯಮವು ಇಂದು ಹುಲುಸಾಗಿ ಬೆಳೆದಿದೆ ಈ ಬೆಳವಣಿಗೆಗೆ ಕಾರಣಕರ್ತರಾಗಿಯೂ ಡಿ. ವಿ. ಜಿ. ಅವರನ್ನು ಗಮನಿಸಬೇಕು. ಭಾವನೆ ಎಂಬ ದಿನ ಪತ್ರಿಕೆಯನ್ನು 1906–07 ರಲ್ಲಿಯೇ ಡಿ. ವಿ. ಜಿ. ಅವರು ನವರತ್ನ ಕೃಷ್ಣಸ್ವಾಮಿಯವರೊಡನೆ ಆರಂಭಿಸಿದರು. ಅನಂತರ ಆ ಮಧ್ಯದಲ್ಲೇ ಅವರ ಸುಮತಿ ಪತ್ರಿಕೆ ಪ್ರಾರಂಭವಾಯಿತು. 1913 ರಲ್ಲಿ ಕರ್ನಾಟಕ ನೆಂಬ ಆಂಗ್ಲ ಪತ್ರಿಕೆಯು ಬಂದಿತು. ನಂತರ 1921 ರಲ್ಲಿ ದಿ ಇಂಡಿಯನ್ ರಿವ್ಯೂ ಆಫ್ ರಿವ್ಯೂಸ್ ಮಾಸ ಪತ್ರಿಕೆಯೂ 1923 ರಲ್ಲಿ ಕರ್ನಾಟಕ ಜನ ಜೀವನ ಮತ್ತು ಅರ್ಥ ಸಾಧಕ ಪತ್ರಿಕೆಗಳು ಹೊರ ಬಂದವು. ಪತ್ರಿಕೋದ್ಯಮ ಕಷ್ಟ ಸಾಧ್ಯವಾದ ಆ ದಿನಗಳಲ್ಲಿ ಈ ಪ್ರಯತ್ನ ಮತ್ತು ಪಡೆದ ಪರಿಣತಿಗಳು ಡಿ ವಿ ಜಿ. ಅವರ ಸಾರ್ವಜನಿಕ ಕ್ಷೇತ್ರದ ಮತ್ತೊಂದು ಮುಖವನ್ನು ಪರಿಚಯ ಮಾಡಿ ಕೊಡುವಲ್ಲಿ ಯಶಸ್ವಿಯಾದದ್ದನ್ನು ಕಾಣುತ್ತೇವೆ.

ಜೀವನ ಚರಿತ್ರೆಯೊಂದಕ್ಕೆ ವಸ್ತುವಾಗಿರುವ ಡಿ. ವಿ. ಜಿ. ಅವರು ತಮ್ಮ ಕಾಲದ ಹಾಗೂ ಅದಕ್ಕೂ ಹಿಂದಿನ ಮಹಾವ್ಯಕ್ತಿಗಳ ಜೀವನದ ಬಗ್ಗೆ ತಿಳಿದು ಕೊಳ್ಳಲು ಆಸಕ್ತರಾದದ್ದು ಅವರ ಕೆಲವು ಕೃತಿ ರಚನೆಗಳಿಗೆ ಕಾರಣವಾಯಿತು 'ಶ್ರೀ ವಿದ್ಯಾರಣ್ಯರು ಮತ್ತು ಅವರ ಸಮಕಾಲೀನರು' 'ರಂಗಾಚಾರ್ಲು', 'ಗೋಪಾಲಕೃಷ್ಣ ಗೋಖಲೆ' ಮುಂತಾದ ಜೀವನ ಚರಿತ್ರೆಗಳನ್ನು ಅವರು ರಚಿಸಿದ್ದಾರೆ. ವಿದ್ಯಾರಣ್ಯರ ಬಗೆಗಿನ ... ವಿಶೇಷ ಮನ್ನಣೆ ಹೊಂದಿದೆ.

ಜ್ಞಾಪಕ ಚಿತ್ರಶಾಲೆಯು ಅಂಕಣ... ವಾರು ಕೃತಿಗಳನ್ನು ಡಿ. ವಿ. ಜಿ. ... ಇಲ್ಲಿ ಅವರ ಕಾಲದಲ್ಲಿ ಆಗಿ ಹೋದ ಪ... ತಿಗಳು, ಸಾರ್ವಜನಿಕರು, ... ಸಾಮಾನ್ಯರುಗಳ ಬಗ್ಗೆ ಅವರು ... ಒಬ್ಬ ವ್ಯಕ್ತಿಗೆ ತನ್ನ ಸುತ್ತಣ ಪರಿ... ಮಾಡಿ ಕೊಡಬಹುದಾದ ಅನು... ಸಾಹಿತ್ಯರೂಪವಾಗಿ ಹೇಗೆ ಹೊ... ವಿಚಾರಗಳಿಗೆ ಈ ಕೃತಿಗಳು ನಿದರ್ಶನ... ಅವಗ ರಾಜ್ಯಶಾಸ್ತ್ರವು ಅವರ ಶಾಸ್ತ್ರ... ಬದ್ಧಿಗೆ ನಿದರ್ಶನವಾಗಿದೆ.

'ಅಂತಃ ಪುರಗೀತೆ'–ಬೇಲೂರು ... ದೇವಾಲಯದ ಮದನಿಕೆಯರ ಶ್ಯ... ಸದ ಸಂಗೀತಮಯ ಚಿತ್ರಣವಾಗಿದೆ. ... ಕೃತಿ ಕನ್ನಡ ಸಾಹಿತ್ಯದಲ್ಲಿ ಅಪರೂಪ... ಶಿಲ್ಪದ ಕಾವ್ಯದ ಬಗ್ಗೆ ಪದಜಾಲ ... ಕಡಿಮೆ, ಒಬ್ಬ ಬೊಪ್ಪಣ ಪಂಡಿತ. ಒ... ಒಬ್ಬ ಡಿ. ವಿ. ಜಿ. ಅಷ್ಟೇ. ಮದನಿಕೆ... ವಿನ್ಯಾಸಗಳಿಗೆ ವ್ಯಾಖ್ಯಾನವೋ ಎ... ತ್ಯದ ಕಾವ್ಯದ ಬನಿ ಹೊಂದಿದ ಈ... ಎಂತಹವರನ್ನೂ ಬೆರಗುಗೊಳಿಸಬ... ಸಾಹಿತ್ಯದ ಶ್ರೀಮಂತಿಕೆ ಇಂತಹ ... ಳಿಂದ. ಚೆನ್ನ ಕೇಶವನ ಅಂತಃಪುರ ಕವಿಗೆ ತುಂಬು ಭಕ್ತಿ.

'ಸಂಸ್ಕೃತವು ಮೂಲ ವಿಗ್ರಹದಂ... ಕುಳಿತಿದ್ದಾಗ ಕನ್ನಡವು ಉತ್ಸವ ... ಹೊರಕ್ಕೆ ಬಂದು ಜನರಿಗೆ ದಿವ್ಯ ... ದೊರಕಿಸಿದೆ'' ಎಂಬ ಅವರ ಮಾತಿನ ... ದರ್ಶನದ ನಿರೂಪಣೆಯಿದೆಯೆಂದು... ತ್ತದೆ. ಕನ್ನಡದ ಗಡಿನಾಡಿನ ಮೂ... ಯೊಬ್ಬ ತಮ್ಮ ಜೀವನದ ಮುಕ್ಕಾ... ಕನ್ನಡದ ನಾಡು ನುಡಿಯ ಸೇವೆಗೆ ಗಂಧದ ಕೊರಡಾದರು.

ಕನ್ನಡ ಸಾಹಿತ್ಯ ಪರಿಷತ್ತಿನೊಂ... ಹೊಂದಿದ್ದ ಸಂಬಂಧ ಅತಿ ಹತ್ತಿರದ... ಸ್ಥಾಪಕ ಸದಸ್ಯರಲ್ಲಿ ಒಬ್ಬರಾಗಿ, ಅ... ಕ್ಷರಾಗಿ (1933–37) ಅದು ವ್ಯಾ...

ವನಸುಮದೊಲೆನ್ನ ಜೀವನವು ವಿಕಸಿಸುವಂತೆ
ಮನವನನುಗೊಳಿಸು ಗುರುವೆ–ಹೇ ದೇವಾ ॥ ಪ ॥
ಜನಕೆ ಸಂತಸವೀವ ಘನನು ನಾನೆಂದೆಂಬ
ಎಣಿಕೆ ತೋರದೆ ಜಗದ ಪೊಗಳಿಕೆಗೆ ಬಾಯ್ಬಿಡದೆ ॥ ಅ.ಪ. ॥
ವನಸುಮ – ನಿವೇದನದಿಂದ

ಮತ್ತು ಅದರ ಧ್ಯೇಯೋದ್ದೇಶಗಳು ಪಿಶಾ
ಿ ಹರಡಲು ಹಲವಾರು ಕಾರ್ಯಕ್ರಮಗ
ಹಾಕಿಕೊಟ್ಟು ಉಪಕಾರ ಮಾಡಿದಾರೆ.
ತರಗತಿಗಳನ್ನು ಆರಂಭಿಸಿ, ವಸಂತ
ತ್ಯೋತ್ಸವಗಳನ್ನು ನಡೆಸಿ, ಪುಸ್ತಕ ಪ್ರದರ್ಶ
ನ್ನು ನಡೆಸುತ್ತ ಕನ್ನಡ ನಾಡಿನ ಜನದಲ್ಲಿ
ನುಡಿಯ ಬಗ್ಗೆ ಅಭಿಮಾನ ಹೆಚ್ಚುವಂತೆ
ಸಲು ಪ್ರಯತ್ನಿಸಿದರು.

932 ರಲ್ಲಿಯೇ ಕನ್ನಡದ ಇವರ ಸೇವೆಯನ್ನು
ತಿಸುವ ರೀತಿಯಲ್ಲೆಂಬಂತೆ ಮಡಿಕೇರಿಯ
ಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಸ್ಥಾನ
ತ್ತು ಗೌರವಿಸಲಾಯಿತು.

ಲ್ಲವರು ಬಹಳಿಲ್ಲ ವೆಂಬ ಮಾತಿಗೆ ಡಿ. ವಿ. ಜಿ.
ರ ಮಟ್ಟಿಗೆ ನಿದರ್ಶನವಾಗಿದ್ದರು ಎಂಬುದನ್ನು
ವರು ಹೇಳಬೇಕು. ಕಗ್ಗದಲ್ಲಿ ಹೇಳಿರುವಂತೆ
ಜೀವದ ಪಾಕ, ಕಷ್ಟ ಧರ್ಮ ವಿವೇಕ'
ಕಹ ಕಷ್ಟವನ್ನು ಎಲ್ಲರಿಗೂ ಇಷ್ಟವಾಗುವಂತೆ
ಗಳಲ್ಲಿ ಪರಿಪಾಕಗೊಳಿಸಿ ಬಡಿಸಿರುವ ಸಾಹಿತ್ಯ
ೀಕ ನಮ್ಮ ಮುಂದಿದೆ. ಉಣ್ಣುವುದಷ್ಟೇ ನಮ್ಮ
ಸ. ಅದಕ್ಕೂ ಸೋಮಾರಿಗಳಾಗಬಾರದು.

ಶ್ರೀಮದ್ಭಗವದ್ಗೀತಾ ತಾತ್ಪರ್ಯ ಅಥವಾ
ನನ ಧರ್ಮಯೋಗ ವಿಶಿಷ್ಟವಾದ ಕೃತಿ. ಭಗವ
ತೆಯನ್ನು—ಎಲ್ಲ ಮತೀಯ ವಿವರಣೆಗಳೊಂದಿಗೆ
ಮರಸ್ಯವನ್ನುಂಟು ಮಾಡಿ – ಸ್ವೀಕರಿಸಬಹು
ಬ ದೃಷ್ಟಿಕೋನ ಇಲ್ಲಿ ವಿವರಿತವಾಗಿದೆ. ಶ್ರೀ
ಮಾನ ಜೀವನವನ್ನು ಭಗವದ್ಗೀತೆಯ ಪಾರ್ಥ
ರಥಿಯ ಮಾತಿಗೆ ಲಕ್ಷಣದಂತೆ ಕಾಣಲಾಗಿದೆ.
ತಿ ಆಶ್ವಾಸದಲ್ಲೂ ನೆನಪಿನಲ್ಲಿ ಉಳಿಯಲು ಸುಲ
ಭಾಗುವಂತೆ ಸಾರಾಂಶವನ್ನು ವಿವರಿಸುವ ಕನ್ನ
ಪದ್ಯಗಳಿವೆ. ಶ್ರೀಮದ್ಭಗವದ್ಗೀತೆಯ
ದೊಂದು ಶ್ಲೋಕವನ್ನು ವಿಪುಲ ಚರ್ಚೆಗೆ
ಪಡಿಸಿ ಆಧುನಿಕ ಜೀವನದಲ್ಲಿ ಹೇಗೆ ಭಗವದ್ಗೀತೆ
ಂದ ಬೆಳಕು ಪಡೆಯಬಹುದೆಂದು ವಿವರಿಸ
ಾಗಿದೆ. ಆಧುನಿಕ ಕನ್ನಡ ಸಾಹಿತ್ಯದಲ್ಲಿ
ನೊಂದು ಮೇರು ಕೃತಿ ಎನ್ನಲಡ್ಡಿಯಿಲ್ಲ.

ಗೀತ ಶಾಕುಂತಲ ಕಾಳಿದಾಸನ ಶಾಕುಂತಲ
ಾಟಕದ ಪದ್ಯಗಳ ಭಾವಗಳಿಗೆ ಕನ್ನಡದ ಗೀತ
ರೂಪ ಕೊಟ್ಟು ವಿವರಿಸುವ ಕೃತಿ. ಕವಿಯ ಭಾವ
ನ್ನು ಸುಪುಷ್ಟವಾಗಿ ವಿವರಿಸುವ ಪ್ರಯತ್ನವನ್ನಿಲ್ಲಿ
ಮಾಡಲಾಗಿದೆ. ಶೃಂಗಾರಮಂಗಳಂ ಬದುಕಿನಲ್ಲಿ
ಾಮನ ಸ್ಥಾನವನ್ನು ಅವನ ಅನಿವಾರ್ಯತೆ
ಯನ್ನು ವಿವರಿಸುವ ಕೃತಿ. ಇಲ್ಲಿ ಭಾರತೀಯ
ರಂಪರೆಯ ಸೃಷ್ಟಿ ರಹಸ್ಯವನ್ನು ವಿವರಿಸುವ
ಯತ್ನವಿದೆ. ಐದು ಸಾಕ್ಷಿಗಳ ಮೂಲಕ ಜೀವನ
ದಲ್ಲಿ ಕಾಮ ಯಮರ ಪ್ರಭಾವವನ್ನು ವಿಶದೀಕರಿಸ
ಲಾಗಿದೆ

ದೇವರು, ಋತ ಸತ್ಯಧರ್ಮ, ಸಂಸ್ಕೃತಿ ಮೊದ
ಲಾದವು ಭಾರತೀಯತೆಯ ಹಿರಿಮೆಯನ್ನು
ಸಾರುವ ಶ್ರೀಯುತರ ಇತರ ಕೃತಿಗಳು.

ಎಲ್ಲ ಕೃತಿಗಳಲ್ಲೂ ಅಂತರ್ನಿಹಿತವಾಗಿರುವ
ಗುಣವೆಂದರೆ ಸರಳತೆ, ಸಾತ್ತ್ವಿಕತೆ ಜೀವನ ಅಗಟ
ವಿಗಟದಲ್ಲಿ ವ್ಯಕ್ತಿ ತನ್ನ ಪಾತ್ರವನ್ನು ಒಪ್ಪಿ ಅದ
ರಂತೆ ನಡೆದು ಸಂತೃಪ್ತವಾಗುವ ಧನ್ಯತೆಯ
ಭಾವ, ವನಸುಮದೊಲೆನ್ನ ಜೀವನವು ವಿ
ವಂತೆ ಮನವ ಅನುಗೊಳಿಸು ಗುರುವೆ
ಪ್ರಾರ್ಥನಾಭಾವ.

ಡಿ. ವಿ. ಜಿ. ಅವರನ್ನು ನಾಡು ಗೌರವಿಸ
ರಿಂದ, ನೆನೆಯುವುದರಿಂದ ರಾಷ್ಟ್ರ ಜೀವ
ಧಾರ್ಮಿಕ ಮೌಲ್ಯಗಳು ಮತ್ತೆ ತಲೆಯೆತ್ತಿ
ಯುವಂತಾಗುತ್ತದೆ. ಜೀವನ ಶಾಂತವಾದ
ವೃದ್ಧಿಯತ್ತ ನಡೆಯಲು ಅವಕಾಶವಾಗುತ್ತ

ಸಾಸಿರದ ತಲೆಯವನು ಸಾಸಿರದ ಕಣ್ಣವನು
ಸಾಸಿರದ ಕಾಲವನು ಪುರುಷನಾದಿಮನು
ಧರೆಯನೆಲ್ಲೆಡೆಯುಮಾವರಿಸಿ ಅದರಾಚೆಯುಂ
ಹರಡಿಹನು ನಾಲ್ಕಾರು ಬೆರಲ ದೂರದೊಳಂ ॥ 1 ॥
ಪುರುಷನೆ ಇದೆಲ್ಲಂ ಆದುದುಂ ಆಗಲಿರ್ಪುದುಂ
ದೊರೆಯವನ್ ಅಮರ್ತ್ಯತೆಗೆ ಬೆಳೆವನುಣಿಸಿಂದೆ ॥ 2 ॥
ಇಷ್ಟೆಲ್ಲ ಮೈಮೆ ಪೂರುಷನದಿನ್ನುಂ ಪೆರ್ಮೆ
ಸೃಷ್ಟಿ ಹಾಗವನೆ ಅಮೃತ ಮುಪ್ಪಾಗ ದಿವಿಯೊಳ್ ॥ 3 ॥
ಮೇಲಿಹನು ಮುಪ್ಪಾಗ ಹಾಗ ಜನಿಸಿಹನಿಹದಿ
ತಾಳಿರ್ಪನ್ ಉಣುವುಣ್ಣದೆನಿತೂ ಬಗೆಯೊಡಲ ॥ 4 ॥

(ಪುರುಷಸೂಕ್ತದಿಂದ)

ಪ್ರತ್ಯಕ್ಷವಿಲ್ಲದಾ ಸ್ವಾಮಿಯಂ ನೆನೆನೆನೆದು
ಸತ್ಯಭಕ್ತಿಯ ಸೇವೆಗೈದವಂ ಭರತಂ
ನಿತ್ಯಜೀವನದಿ ನೀನಾ ನಯವನನುಸರಿಸೊ
ಸ್ವತ್ವದಾಶೆಯ ನೀಗಿ—ಮಂಕುತಿಮ್ಮ

(ಮಂಕುತಿಮ್ಮನಕಗ್ಗದಿಂದ)

ಜಗಳವೇತಕೆ ತಮ್ಮ ನಿನಗೆನಗೆ ಸರ್ವರಿಗೆ
ಜಗದೊಳೆಡೆಯಿರಲಾಗಿ ಸೊಗದಿ ಬದುಕಲಿಕೆ
ಅಗಲವಿದೆ ನೆಲ ನಾವು ಮನವನಿಕ್ಕಟ ಮಾಡಿ
ದುಗುಡ ಪಡುವುದು ಸರಿಯೇ—ಮರುಳಮುನಿಯ

(ಮರುಳಮುನಿಯನ ಕಗ್ಗದಿಂದ)

# ತಿರುಪ್ಪಾವೈ

## 1

ಮಾರ್ಗಳಿ ತಿಂಗಳ್ ಮದಿನಿರೈನ್ದ ನನ್ನಾಳಾಲ್
ನೀರಾಡ ಪ್ಪೋದುವೀರ್ ಪೋದುಮಿನೊ ನೇರಿಳೈಯೀರ್
ಶೀರ್‌ಮಲ್ಗುಂ ಆಯ್‌ಪ್ಪಾಡಿ ಶೆಲ್ವಚ್ಚಿರುಮೀರ್‌ಗಾಳ್
ಕೂರ್‌ವೇಲ್ ಕೊಡುಂದೊಳಿಲನ್ ನಂದಗೋಪನ್ ಕುಮರನ್
ಏರಾರ್‌ಂದ ಕಣ್ಣಿ ಯಶೋದೈ ಯಿಳ ಸಿಂಗಮ್
ಕಾರ್ಮೇನಿಚ್ಚೆಂಗಣ್ ಕದಿರ್ ಮದಿಯಂಬೋಲ್ ಮುಗತ್ತಾನ್
ನಾರಾಯಣನೇ ನಮಕ್ಕೇ ಪರೈ ತರುವಾನ್
ಪಾರೋರ್ ಪುಗಳಪ್ಪಡಿಂದೆಲೊ ರೆಂಬಾವಾಯ್

ಮಾರ್ಗಶೀರ್ಷ ಮಾಸವಂತೆ ಮನತುಂಬುವ ತಿಂಗಳಂತೆ
ನೀರಿನಲ್ಲಿ ಮಿಂದು ಬರುವ ಬನ್ನಿರೆಲ್ಲ ಸುಂದರಿಯರೆ
ಒಳ್ಳೆ ವಂಶದಲ್ಲಿ ಹುಟ್ಟಿಬಂದ ಗೊಲ್ಲ ಕನ್ನಿಕೆಯರೆ
ಕೋಲ ಕರದೆ ಹಿಡಿದು ಕಾಯ್ವ ನಂದ ಗೋಪಕುವರನವನ
ತೋಯಜಾಕ್ಷಿ ಯಶೋದಮ್ಮ ಹಡೆದ ಗಂಡು ಪುಟ್ಟಸಿಂಹ
ಕರಿಯ ತನುವ ಹೊಳೆವ ಕಣ್ಣ ಸೂರ್ಯಚಂದ್ರರಂಥ ಮೊ
ನಾರಾಯಣನಾತ ನಮಗೆ ಸಕಲವನ್ನು ತಂದು ಕೊಡುವ
ಲೋಕ ಜನದ ಪೊಗಳಗೊಂಬ ಅವನ ನೆನೆದು ನೋಂಪಿಗೈ



ಹನ್ನೆರಡು ಮಂದಿ ಆಳ್ವಾರುಗಳು ಹಾಡಿದ ನಾಲ್ಕು ಸಾವಿರ ದಿವ್ಯಪ್ರಬಂಧಗಳು ಶ್ರೀ ವೈಷ್ಣವರಿಗೆ ಪರಮ ಪೂಜ್ಯವಾದವು. ಅವರಲ್ಲಿ ಗೋದಾದೇವಿ ಹಾಡಿದ ತಿರುಪ್ಪಾವೈನ 30 ಪಾಶುರಗಳನ್ನು ವಿಷ್ಣು ಆಲಯಗಳಲ್ಲಿ ದಿನಕ್ಕೊಂದರಂತೆ ಹಾಡುತ್ತ, ಧನುರ್ಮಾಸದಲ್ಲಿ ಭಕ್ತಿ ಪ್ರಪತ್ತಿಯಿಂದ ದಿನವನ್ನು ಆರಂಭಿಸುವುದು ಪರಂಪರೆ. ಶ್ರೀವೆಂಕಟೇಶ್ವರ ಸ್ವಾಮಿ ಸನ್ನಿಧಿಯಲ್ಲೂ ಧನುರ್ಮಾಸದಲ್ಲಿ ಇದೇ ಪರಂಪರೆ ಸಾಗಿಬಂದಿದೆ.

ಗೋದಾದೇವಿ ಹಾಡಿದ ತಿರುಪ್ಪಾವೈಯನ್ನು ಹಲವರು ಹಿರಿಯರು ಕನ್ನಡಕ್ಕೆ ಗದ್ಯ, ಪದ್ಯ, ಗೀತೆಗಳಲ್ಲಿ ಅನುವಾದ ಮಾಡಿದ್ದಾರೆ. ತಿರುಪ್ಪಾವೈಯ ಆಧಾರದಲ್ಲಿನ ಶ್ರೀ ಶಶಿ ಅವರ ಚಿತ್ರ ಕಲ್ಪನೆಗೆ ತಕ್ಕಂತೆ ಕನ್ನಡ ವಿವರಣೆಯನ್ನು ಇಲ್ಲಿ ಪ್ರಸ್ತುತ ಪಡಿಸಲಾಗಿದೆ. ॥ಸಂ॥

## 2

ವೈಯೆತ್ತು ವಾಳವೀರ್‌ಗಾಳ್ ನಾಮುಮ್‌ನಂಬಾವೈಕ್ಕು
ಚ್ಚೆಯುಮ್ ಕಿರಿಶೈಗಳ್ ಕೇಳಿರೋ ಪಾಲ್ಕಡಲುಳ್
ಪ್ಪೈಯೆತ್ತುಯಿನ್ರ ಪರಮನಡಿಪ್ಪಾಡಿ
ನ್ನೈಯ್ಯುಣ್ಣೋಮ್ ಪಾಲುಣ್ಣೋಮ್ ನಾಟ್ಕಾಲೆ ನೀರಾಡಿ
ಮೈಯೆಳುದೋಮ್ ಮಲರಿಟ್ಟು ನಾಮುಡಿಯೋಮ್
ಶ್ಶೈಯ್ಯಾದನೆ ಶೈಯ್ಯೋಮ್ ತೀಕ್ಕುರಳೆ ಚ್ಚೆನ್ರೋದೋಮ್
ಐಯ್ಯಮುಮ್ ಪಿಚ್ಚೆಯುಮ್ ಆಂದನೈಯುಮ್ ಕೈಕಾಟ್ಟಿ
ಉಯ್ಯುಮಾರೆಣ್ಣಿ ಯುಗಂದಲೋರೆಂಬಾವಾಯ್

ನೋಂಪಿಯಲ್ಲಿ ನಾವುಗೈವ ಕ್ರಮವ ಪೇಳ್ವೆ ಕೇಳಿ ಜನರೆ
ಹಾಲುಗಡಲು ಶಯ್ಯೆಯಾದ ಪರಮ ಪುರುಷನಡಿಗೆ ಎರಗಿ
ಹೊತ್ತು ಹುಟ್ಟುತಿರುವಂತೆ ಎದ್ದು ಮಿಂದು ಮಡಿಯನುಟ್ಟು
ದೊಡ್ಡದಾದ ಮನವ ಹೊಂದಿ ದಾನಧರ್ಮ ಕಾರ್ಯಮಾಡಿ
ಮುಡಿಗೆ ಹೂವ ಮುಡಿಯದಂತೆ ಕಣ್ಗೆ ಕಪ್ಪ ಹಚ್ಚದಂತೆ
ಹಾಲು ಮೊಸರು ಬೆಣ್ಣೆ ತುಪ್ಪ ಮುಟ್ಟದೆಯೇ ಇದ್ದು ಕೊಂಡು
ಹಿರಿಯ ಜನರು ಮಾಡದಂತ ಕಾರ್ಯಗಳನು ಮಾಡದಿದ್ದು
ಹೊಲ್ಲಮಾತನಾಡದಿದ್ದು ಅವನ ನೆನೆದು ನೋಂಪಿಗೈವ



# ಆಂಧ್ರ ಕವಿ ಪುಂಗವ

# ಪೋತನ

ಹಸುಗಳ ಬಣ್ಣ ಬೇರೆ–ಹಾಲಿನ ಬಣ್ಣ ಒಂದೆ. ಹೂಗಳ ಬಣ್ಣ ಬೇರೆ–ಪೂಜೆಯೊಂದೆ. ಸಕ್ಕರೆ ಯಚ್ಚಿನ ಬಣ್ಣ, ಬೇರೆ ಆಕಾರ ಬೇರೆ, ಮಾಧುರ್ಯ ಒಂದೆ. ಭಾಷೆಗಳು ಬೇರೆ–ಭಾವವೊಂದೆ. ಕೃಷ್ಣ ಚರಿತೆಯನ್ನು, ಬಾಲಗೋಪಾಲನ ಲೀಲಾ ವಿನೋದಗಳನ್ನು, ಯಾವ ಭಾಷೆಯಲ್ಲಿ ಬರೆದರೇನು, ಯಾವ ಕವಿ ಬರೆದರೇನು–ಅದರ ಸೊಗಸಿಗೆ ಕುಂದಿಲ್ಲ–ಮಹತ್ತ್ವಕ್ಕೆ ಚ್ಯುತಿಯಿಲ್ಲ.

ಸುಮಾರು ಆರುಶತಮಾನಗಳ ಹಿಂದೆ ಆಂಧ್ರ ದೇಶದ ಬೊಮ್ಮೆರ ಎಂಬ ಗ್ರಾಮದಲ್ಲಿ ಕೇಸನ್ನ (ಇದು ಕೇಶವಣ್ಣ ಎಂಬುದರ ಗ್ರಾಮರೂಪ) ಎಂಬ ಸಾತ್ತ್ವಿಕ ಗೃಹಸ್ಥನಿದ್ದ. ಆತನ ಪತ್ನಿ ಲಕ್ಷಮ್ಮ. ಈ ದಂಪತಿಗಳ ಮಗನೆ ತೆಲುಗು ಭಾಷೆಯಲ್ಲಿ ಭಾಗವತ ರಚಿಸಿದ ಪರಮ ಭಾಗವತೋತ್ತಮ–ಕವಿಪುಂಗವ–ಪೋತನ. ಈತನನ್ನು ಆಂಧ್ರದೇಶದ ಜನ ಅಭಿಮಾನದಿಂದ, ಭಕ್ತಿಯಿಂದ-ಭಕ್ತಪೋತನ ಪೋತನಾಮಾತ್ಯ ಎಂದು ಕರೆದರು. ಈತನು ಪರಮ ಪರಿಶುದ್ಧ ವ್ಯಕ್ತಿ, ಪರಮಸಾತ್ತ್ವಿಕ, ಯದೃಚ್ಛಾ ಲಾಭ ಸಂತುಷ್ಟನಾದ ಉದಾತ್ತ ಜೀವಿ; ಆಂಧ್ರ ಸಾಹಿತ್ಯದಲ್ಲಿ ಸಮಾದರಣೀಯವ್ಯಕ್ತಿ. ಆಂಧ್ರ ಸಾಹಿತ್ಯದ ಮೌಳಿಮಣಿಯಾದ, ಭಕ್ತಿ ರಸೋದ್ಬೋಧಕವಾದ ಭಾಗವತವನ್ನು ರಚಿಸಿದ. ಈತ ಪರಮಾರ್ಥಾಕಾಂಕ್ಷಿ, ತನ್ನ ನಮ್ರತೆ ಹಾಗೂ ಶುದ್ಧ ಜೀವನದಿಂದ ಲೋಕ ವಿಖ್ಯಾತನಾಗಿದ್ದಾನೆ. ಈ ವಾಙ್ಮಯರಹಸ್ಯವೇತ್ತ ರಸಪೋಷಣೆಯಲ್ಲಿ ಸಿದ್ಧ ಕವಿ, ಭಾವ ಪೋಷಣೆಯಲ್ಲಿ ಪ್ರಸಿದ್ಧ ಕವಿ ತನ್ನ ಕಾಲದ ಯಾವ ಮಹಾರಾಜನ ಪ್ರಲೋಭನೆಗೂ ಒಳಗಾಗದ ಧೀರಜೀವ. ವೀರಭದ್ರವಿಜಯ, ಭೋಗಿನಿದಂಡಕ, ಭಾಗವತ–ಈ ಮೂರು ಗ್ರಂಥಗಳನ್ನು ರಚಿಸಿದ ಪೋತನ ಕಾವ್ಯಕಲಾ ಪ್ರೌಢಿಮೆ ಅನುಕ್ರಮವಾಗಿ ಬೆಳೆದು ಭಾಗವತದಲ್ಲಿ ಪರಿಪಕ್ವವಾಗಿದೆ.

ಜಗತ್ತಿನ ಮಹಾಕವಿಗಳೆಲ್ಲರೂ ದೈವೀ ಪ್ರೇರಣೆಯಿಂದ ಕಾವ್ಯರಚಿಸಿ ಧನ್ಯರಾಗುತ್ತಾರೆ. ಲೋಕೋಪಕಾರ ಮಾಡಿ ಕೃತಾರ್ಥರಾಗುತ್ತಾರೆ. ಬಹುಶಃ ಈ ಮಹಾಕವಿಗಳು ಪರಮಾತ್ಮನ ಕೈಯಲ್ಲಿ ಆರಿಸಿದ ಆಯುಧಗಳಂತಿರುತ್ತಾರೆ. ಲೋಕದ ಅನಭಿಷಿಕ್ತ ಶಾಸಕರಾದ ಕವೀಶ್ವರರು ಜನ ಜೀವನಕ್ಕೆ ಬೆಳಕು ನೀಡುತ್ತಾರೆ. ಅವರ ಕಾವ್ಯಗಳು ತಮ್ಮ ಅಂತಸ್ಸತ್ತ್ವದಿಂದ ಅಜರಾಮರ ಕೀರ್ತಿ ಪಡೆದಿರುತ್ತವೆ. ಕಾವ್ಯಂ ಕಲ್ಪಾಂತರ ಸ್ಥಾಯೀ–ಎಂಬ ಮಾತು ಇಂತಹ ಕಾವ್ಯಗಳಿಗೆ ಮಾತ್ರ ಅನ್ವಯವಾಗುತ್ತದೆ.

ಆಂಧ್ರಭಾಷೆಯಲ್ಲಿ ರಾಮಾಯಣ–ಭಾರತ–ಹರಿವಂಶ–ಮಾರ್ಕಂಡೇಯ ಪುರಾಣ-ಮುಂತಾದ ಗ್ರಂಥಗಳು ಪೋತನನಿಗಿಂತ ಮುಂಚೆಯೇ ಬಂದಿದ್ದು ಭಾಗವತ ರಚನೆಗೆ ಮಾತ್ರ ಯಾರೂ ಕೈಹಾಕಿರಲಿಲ್ಲ. ಬಹುಶಃ ಈ ಮಹಾಕಾರ್ಯ ಈ ಪುಣ್ಯಜೀವಿಗೆ ಮೀಸಲಾಗಿದ್ದಿರಬಹುದು. ಯಾರಿಂದ ಯಾವ ಕೆಲಸ ಮಾಡಿಸಬೇಕೆಂದು ದೈವ ಸಂಕಲ್ಪ. ಅನಿತರ ಸಾಧಾರಣ ಮೃದುಮಧುರ ಚಿತ್ರೋಪಮ ಶೈಲಿ ಪೋತನನಿಗೆ ದೈವದತ್ತವಾದ ಅನುಗ್ರಹ. ಸುಕುಮಾರಿಯೂ ಸುಂದರಿಯೂ ಆದ ಈತನ ಕಾವ್ಯಕನ್ಯೆ ವಿಚಿತ್ರಾಲಂಕಾರ ವಿರಾಜಿತೆ, ಸರ್ವಾಲಂಕಾರ ಪರಿಶೋಭಿತೆಯಾದ ಲಾವಣ್ಯಮಯಿ. ಆಂಧ್ರಭಾಗವತ ಕೇವಲ ಕಥಾಮಾಲಿಕೆಯಲ್ಲ, ಶುಷ್ಕವೇದಾಂತವಲ್ಲ, ಏಕೆಂದರೆ ಕವಿ ಪೋತನನ ರಸಮಯದೃಷ್ಟಿ ಅದನ್ನು ಲೋಕ ಭಾವ್ಯ ರಮಣೀಯ ಕಾವ್ಯವಾಗಿ ಮಾಡಿದೆ. ಮಾಧುರ್ಯ, ಲಾಲಿತ್ಯ, ಸೌಂದರ್ಯ, ಸೌಕುಮಾರ್ಯಗಳೇ ಮೂರ್ತೀಭವಿಸಿದಂತಿದೆ ಆಂಧ್ರಭಾಗವತ. ಈ ಗ್ರಂಥವನ್ನು ಆರನೇ ಸ್ಕಂಧದವರೆಗೆ ಪೂರ್ವಭಾಗವೆಂದೂ–ನಂತರ ಹನ್ನೆರಡನೆ ಸ್ಕಂಧದ ವರೆಗೆ ಉತ್ತರ ಭಾಗವೆಂದು ವಿಂಗಡಿಸುವುದಾದರೆ, ಪೋತನನ ಕಾವ್ಯರಚನಾಕೌಶಲ, ಸೌಂದರ್ಯ, ಪ್ರಾಗಲ್ಭ್ಯಗಳು ಪೂರ್ಣವಿಕಸಿತ ಸುಂದರಮಂದಾರದಂತೆ ಕಂಗೊಳಿಸುವುದು ಉತ್ತರಾರ್ಧದಲ್ಲೆಂದು ಹಿರಿಯರ ಅಭಿಪ್ರಾಯ. ಈ ಮಹಾತ್ಮ ಭಕ್ತಿರಸೋನ್ಮತ್ತ, ಭಗವದ್ವರ್ಣನಾಭಾಗ ಬಂದಾಗ

ಮೈಮರೆತು ಹೋಗುತ್ತಾನೆ. ಹಾ
ಭಾವಕ್ಕೆ ಕಾವ್ಯರೂಪವನ್ನು ಕೆ
ಈತನಿಗೆ ಸರಿಸಾಟಿಯಾದ ಕವಿ ಸಃ
ಸಾಹಿತ್ಯದಲ್ಲಿ ಇನ್ನೊಬ್ಬನಿಲ್ಲ. ಸಕ
ವಿಶಾರದನಾದ ಪೋತನನ ಕಾ
ಸಾಗರ.

ಆಂಧ್ರಭಾಗವತಕ್ಕೆ ಇಷ್ಟೊಂದು
ಸಲ್ಲ ಬೇಕಾದರೆ ಒಂದು ಪ್ರಬಲಕಾರ
ರಾಮಾನುಗ್ರಹ.

ಪೂಜಾಗೃಹದಲ್ಲಿ, ತನ್ನ ಆರಾಧ
ಶ್ರೀರಾಮಚಂದ್ರನ ಮುಂದೆ
ಪೋತನ ಭಾಗವತದಲ್ಲಿ ಗಜೇಂದ್ರ
ಸನ್ನಿವೇಶ ಬರೆಯುತ್ತಿದ್ದಾನೆ. ಗ
ಮೊಸಳೆ ಹಿಡಿದಿದೆ. ಗಜೇಂದ್ರ ಬಿ
ಹೆಣಗುತ್ತಿದ್ದಾನೆ. ಕ್ರಮೇಣ ಅವನ
ಗುತ್ತಿದೆ. ಗಜರಾಜ ದಿಕ್ಕುತೋಚದೆ,
ಗುಂದುತ್ತದೆ. ಆತಂಕ ಇಮ್ಮಡಿಸುತ್ತ
ದಿಕ್ಕುತೋಚದೆ ಭಗವಂತನನ್ನು
ಬೇಡಿಕೊಳ್ಳುತ್ತಿದ್ದಾನೆ. ಕವಿ ಬರೆಯು
ಬಿಕ್ಕಿ ಬಿಕ್ಕಿ ಅಳುತ್ತಿದ್ದಾನೆ. ಆಗಾಗ
ದಿಂದ ಕಣ್ಣೊರಸಿ ಕೊಳ್ಳುತ್ತಿದ್ದಾ
ಘಟ್ಟದಲ್ಲಂತೂ ಕವಿಗೆ ದುಃಖ ಉಮ್ಮ
ಲೇಖನಿ ಹಾಗೇ ನಿಂತು ಹೋಯಿತ್ತು

**ವಿದ್ವಾನ್ ಬ.ನ. ಗುಂಡ.**

ಮುಂದುವರಿಯಲಿಲ್ಲ. ಪೋತನನಿಗೆ
ದಾಯ್ತು. ತಾಳೆಗರಿಗಳನ್ನು ಹಾಗೆ
ಯನ್ನಲ್ಲೇ ಇಟ್ಟು, ರಾಮನಿಗೆ ಕೈಮ
ನಿನ್ನ ಚಿತ್ತ–ಎನ್ನುತ್ತ ಎದ್ದು ಹೋ
ಸುಮಾರು ಹತ್ತು ನಿಮಿಷಕ್ಕೆ ಶ್ರೀರಾ
ಪೋತನನಂತೆ ವೇಷಧರಿಸಿ ಬಂದು
ನಿಂತಿತು – ಅಲ್ಲಿಂದ ಮುಂದುವ
ಹೊರಟುಹೋದ. ಸ್ವಲ್ಪ ಹೊತ್ತಿನ
ಪೋತನ ಬಂದು ನೋಡುತ್ತಾನೆ–ಕಾ
ವರಿಸಲಾಗಿದೆ !! ಬರೆದವರಾರು ?
ಲೋಕೋತ್ತರ ದಿವ್ಯ ಭವ್ಯ ಭಾವಲ
ಯನ್ನು ಕೇಳಿದ. ಆಕೆ–ಇದೇನು ಹೀ
ಈಗ ತಾನೆ ನೀವೇ ಬಂದು ಬರೆದಿರಿ
ಹೋದಿರಿ, ಇದೀಗ ಬಂದು ಬರೆ
ಕೇಳುತ್ತಿದ್ದೀರಿ?–ಎಂದಳು. ಪೋತ
ಹಾಗೇ ಯೋಚಿಸಿದ. ಆತನ ಧ್ಯಾ
ದಾವ ದಿವ್ಯದೃಶ್ಯ ಕಂಡಿತೋ!! "ನ
ನನ್ನ ಜನ್ಮಸಾರ್ಥಕವಾಯ್ತು. ನ
ಭಾಗ್ಯ ಲಭ್ಯವಾಗಲಿಲ್ಲ" ಎಂದು
ಕೊಂಡಾಡಿದ. ಆ ಬಡ ಕುಟೀರವ
ಮಾಡಲು ಬಂದಿದ್ದವನು ಸ್ವಯಂ

ನಂತೆ!! ಗಜೇಂದ್ರಮೋಕ್ಷವನ್ನು ಪೂರ್ಣ ಸಿದವನು ಕೌಸಲ್ಯಾಸುಪುತ್ರನಂತೆ!! ಪೋತನನ ಂಥಕ್ಕೆ ಕೈಮುಗಿದ. ರಾಮು ಹಿಡಿದಿದ್ದ ಆ ಲೇಖ ಕೈಮುಗಿದ, "ಅಜ್ಞಾನ ಬಗ್ಗೆ ಅದೇನು ಕರುಣೆ, ಜನ ಮಾದಾರ. ನನ್ನ ಮೇಲೆ ಅದೆಂತಹ ಅದೃಷ್ಟಿ ಬೀರಿದೆ" ಎಂದು ಗದ್ಗದ ಕಂಠದಿಂದ ನೆ. ಅಲ್ಲಿಂದಾಚೆಗೆ ಕವಿಗೆ ಗ್ರಂಥರಚನೆಯಲ್ಲಿ ವ ವಿಘ್ನವೂ ಬರಲಿಲ್ಲ. ಯಾವ ಸಂಶಯವೂ ಲ್ಲ. ಪ್ರಭು ಕೃಪೆಯಿಂದ ಭಾಗವತ, ಮಂಗಳ ಡಾಕೆಸೀರಸಧಾರೆಯಂತೆ ನಿರರ್ಗಳವಾಗಿ ಪ್ರವ ು.

ರಾಮಾನುಗ್ರಹದಿಂದ ಕಾವ್ಯಲೋಕ ಪ್ರಸಿದ್ಧ ಯ್ತು. ಆದರೆ ಕವಿಯ ಬಡತನ ತೀರಲಿಲ್ಲ. ತನ ಸಮೀಪ ಬಂಧುವಾದ ಶ್ರೀನಾಥಕವಿ, ಯನಗರ ಸಂಸ್ಥಾನದ ನವರತ್ನಗಳಲ್ಲೊಬ್ಬ. ರಾಸ್ಥಾನಕ್ಕೆ ಬರುವುದಾದರೆ ಕನಕಾಭಿಷೇಕ ಡಿಸುತ್ತೇನೆಂದು ಪೋತನನನ್ನ ಒತ್ತಾಯಿಸಿ —ಆ ಮಹಾತ್ಮ ಹೇಳಿದ್ದೇನು?—

ಬಾಲ ರಸಾಲಸಾಲ ನವಪಲ್ಲವ ಕೋಮಲ
ಕಾವ್ಯಕನ್ಯೆಯನ್ನು
ಬೂಳರಿಗೆ ಕೊಟ್ಟು—ಅವರೀಯುವ ಹಣದಿಂದ
ಹೊಟ್ಟೆ ಹೊರೆದು
ಕೊಳ್ಳುವುದಕ್ಕಿಂತಲೂ, ಸತ್ಕವಿಗಳಾದವರು,
ತಮ್ಮ ಕುಟುಂಬ
ಪೋಷಣೆಗಾಗಿ ಕೃಷಿಮಾಡಿದರೆ ತಪ್ಪೇನು?
ಅಥವ ಕಂದ ಮೂಲಗಳನ್ನೇ ತಿಂದು
ಜೀವಿಸಿದರೆ ತಾನೆ ತಪ್ಪೇನು?

ರ್ಜ್ಞ ಸಿಂಗಭೂಪಾಲನೆಂಬ ರಾಜ, ಪೋತನನ ಸಕಾಲೀನ. ಭಾಗವತವನ್ನು ತನಗಂಕಿತ ಮಾಡಿ ಟ್ಟರೆ—ಬಹಳ ಕೊಡುವುದಾಗಿ ಪ್ರಲೋಭನ ದ. ಇದೇನು ಪರೀಕ್ಷೆಯೊಡ್ಡುತ್ತಿದ್ದಾನೆ ಮ—ಎಂದು ಪೋತನ ಬಹುವಾಗಿ ಆಲೋಚನೆ ಾಡಿದ. ಇಂಥ ಧರ್ಮಸಂಕಟ ಬಂದಾಗ—ಭಗ ತನನ್ನೇ ಕೇಳುವುದು ಆತನ ಪದ್ಧತಿ. ಅದರಂತೆ ಹ್ಮೀಮುಹೂರ್ತದಲ್ಲೆದ್ದು ದೇವರ ಮನೆಗೆ ಾಗಿ ನೋಡುತ್ತಾನೆ. ಅಲ್ಲೊಂದು ಅದ್ಭುತ ಶ್ಯ!! ವ್ಯಾಸಪೀಠದ ಮೇಲಿದ್ದ ಭಾಗವತ ಗ್ರಂಥದ ಲೆ ಭಗವತಿ ಶಾರದೆ ಕಣ್ಣೀರು ಹಾಕುತ್ತ ನಿಂತಿ ಳೆ. ಕವಿ ಬೆರಗಾದ. ನನ್ನನ್ನು ಹೊನ್ನಿಗಾಗಿ ಾರುತ್ತೀಯೇನು? — ಎಂದು ವೇದಕಳಾಮ ಯೂ ನಾದಸ್ವರೂಪಿಣಿಯೂ ಆದ ಸರಸ್ವತಿ ಶ್ನಿಸಿದಳು. ಪೋತನ ಗಡಗಡ ನಡುಗಿ ಹೋದ, ಮಗಿದು ಅರಿಕೆ ಮಾಡಿದ—ಕೈಟಭ ದೈತ್ಯ ರ್ದನನ ಮುದ್ದು ಸೊಸೆ ಶಾರದೆ, ನಾನು ನ್ನನ್ನು ಯಾರಿಗೂ ಮಾರುವುದಿಲ್ಲ. ಯಾರಿಗೂ ಕೊಡುವುದಿಲ್ಲ. ತ್ರಿಕರಣ ಪೂರ್ವಕವಾಗಿ ಭಾಷೆ ಕೊಡುತ್ತಿದ್ದೇನೆ. ನನ್ನ ಮಾತು ನಂಬು ತಾಯಿ" ಎಂದ. ಆಗ ಆಕೆಗೆ ಆನಂದವಾಯ್ತು. ಪೋತನನ ಭಗವತಿಯ ನಗೆಮೊಗವನ್ನು ಕಂಡನು. ಆತನ ಗ್ರಂಥ — ಭವತಾರಿಣಿಯ ರಾಜಾಧಿರಾಜಪೂಜಿತ ಚರಣಾರವಿಂದಗಳ ಸ್ಪರ್ಶದಿಂದ ಪಾವನವಾದ ಕಾವ್ಯ.

ಗಜೇಂದ್ರ ಮೋಕ್ಷ, ವಾಮನ ಚರಿತೆ—ಪ್ರಹ್ಲಾದ ಚರಿತ್ರೆ—ದಶಮಸ್ಕಂಧದ ಕೃಷ್ಣ ಚರಿತ್ರೆ...... .. ಇತ್ಯಾದಿ ಸನ್ನಿವೇಶಗಳಂತೂ ನ ಭೂತೋ ನ ಭವಿಷ್ಯತಿ — ಎಂಬಷ್ಟು ರಮಣೀಯವಾಗಿವೆ. ಈತ ಕೊಡುವ ರಾಸನೃತ್ಯದ ವಿಶದ ವಿವರಣೆಯಂತೂ ಅನುಪಮ — ಅದ್ವಿತೀಯ. ಮಾತಿಗೆ ಸಿಲುಕದ ಮಾಧುರ್ಯ ಇಲ್ಲಿ ಪ್ರಧಾನ ಅಂಶ.

ತೆಲುಗು ಸಹಜ ಸುಂದರ ಮಧುರಭಾಷೆ. ಸಂಸ್ಕೃತವು ಸುಲಭವಾಗಿ ಸಮ್ಮಿಳಿತವಾಗುವುದರಿಂದ ತೆಲುಗಿಗೆ, ಅನ್ಯ ಯಾವ ಭಾರತೀಯ ಭಾಷೆಯಲ್ಲೂ ಇಲ್ಲದಷ್ಟು, ಲಾಲಿತ್ಯ ಹಾಗೂ ನಾದಮಾಧುರ್ಯ ಲಭ್ಯ ವಾಗಿದೆ ಎನ್ನುವುದನ್ನು ಯಾರೂ ಅಲ್ಲಗಳೆಯು ವಂತಿಲ್ಲ. ಪೋತನನ ಶೈಲಿ ಆಂಧ್ರಭಾಷಾಭಾರತಿ ನಕ್ಕುಲಿದು ಲಾಸ್ಯ ಮಾಡಿದ್ದಾಳೆ. ಮಾದರಿಗಾಗಿ ಕೆಲವು ಉದಾಹರಣೆ ಕೊಡುವುದು ಸೂಕ್ತ.

ಶಾರದ ನೀರದೇಂದು ಘನ ಸಾರ
ಪಟೀರಮರಾಳ ಮಲ್ಲಿಕಾ
ಹಾರ ತುಷಾರ ಫೇನ ರಜತಾಚಲ
ಕಾಶಫಣೀಶ ಕುಂದಮಂ
ದಾರ ಸುಧಾಪಯೋಧಿ
ಸಿತತಾಮರಸಾಮರವಾಹಿನೀ ಶುಭಾ
ಕಾರತನೊಪ್ಪು ನಿನ್ನುಮದಿ
ಗಾನಗ ನೆನ್ನಡು. ಗಲ್ಗು ಭಾರತೀ
ಅಂಬ ನವಾಂಬುಜೋಜ್ವಲ ಕರಾಂಬುಜ
ಶಾರದ ಚಂದ್ರ ಚಂದ್ರಿಕಾ
ಡಂಬರ ಚಾರು ಮೂರ್ತಿ ಪ್ರಕಟಸ್ಫುಟ
ಭೂಷಣ ರತ್ನ ದೀಪಿಕಾ
ಚುಂಬಿತ ದಿಗ್ವಿಭಾಗ ಶ್ರುತಿ ಸೂಕ್ತಿ
ವಿವಿಕ್ತ ನಿಜಪ್ರಭಾವ ಭಾ
ವಾಂಬರ ವೀಧಿ ವಿಶ್ರುತ ವಿಹಾರಿಣೀ
ನನ್ ಗೃಪ ಜೂಡು ಭಾರತೀ

—ಈ ಎರಡು ಉತ್ಪಲ ಮಾಲೆಗಳಲ್ಲಿ ಕೊನೆಯ ಪಾದ ದಲ್ಲಿ ಮಾತ್ರ ತೆಲುಗು ಶಬ್ದಗಳ ಪ್ರಯೋಗವಿದ್ದು ಉಳಿದೆಲ್ಲವೂ ಸಂಸ್ಕೃತ ಶಬ್ದಗಳೆಂಬ ಅಂಶವನ್ನು ನಾವು ಗಮನಿಸಬೇಕು. ಪೋತನನಿಗೆ ಈ ಎರಡೂ ಭಾಷೆಗಳಲ್ಲಿ ಪೂರ್ಣ ಪಾಂಡಿತ್ಯವಿತ್ತು. ರಚನಾ ಸಮರ್ಥ ಪರಿಕವಿಗಳಿಗೆ ಕಾವ್ಯ ಲೀಲಾಜಾಲ. ಆಂಧ್ರಭಾಗವತ ಚಂಪೂ ಚಂಪೂಗ್ರಂಥಗಳಲ್ಲಿ ಗದ್ಯದಗಾಂಭೀರ್ಯ ಕಾಣ ವ ಅಂಶ. ಶ್ರೀಕೃಷ್ಣ ದ್ವಾರಕಾ ಬರುವ ಸಂದರ್ಭದಲ್ಲಿ ಈತನ ಗದ್ಯದ ಸ ಗಮನಾರ್ಹವಾಗಿದೆ. ಆಂಧ್ರಭಾಗವತದ ತುಣುಕು ಇಲ್ಲಿ ಉದಾಹರಣೆಗಾಗಿ ಬರೆಯುತ್ತೇ

"ಭಕ್ತಿಯುಕ್ತ ಮಧುರ ಮಂಜುಳಾಲಾಪ ಕರ್ಣ ಕಲಾಪಂಬುಲುಗಾ ನವಧರಿಂಚಿ ವಲೋಕ ನಂಬುಲು ನ ಹರ್ಷಿಂಚಿಚು, ಸಕಲ ಕಲಾಸಂಪದ್ಯ ಕುರ ಪಲ್ಲವ ಕೋರಕ ಕುಟ್ಮಲ ಕುಸು ಮಂಜರೀಪುಂಜ ಭಾರವಿನಮಿತ ಲತಾ ರಾಜಿ ವಿರಾಜಿತೋದ್ಯಾನ ಮಹಾ ವನೋ ರಾಮ ಭಾಸಿತಂಬುನು, ವನಾಂತರಾಳ ಸಾಲ ಶಾಖಾಂಕುರ ಖಾದನಕ್ಷೋಭ ಕಂಠ ಕಲಕಂಠ ಮಿಥುನ ಕೋಲಾಹಲ ಸ್ವಾದ ಪರಿಪೂರ್ಣಶಾರಿಕಾ ಕೀರಕುಲ ಕಲ್ಹಾರ ಪುಷ್ಪ ಮಕರಂದಪಾನಪರವ ಭೃಂಗೀಕದಂಬ ಝುಂಕಾರ ಸರೋವ ಕಮಲ ಮೃದುಲಕಾಂಡ ಖಂಡ ಸ್ವೀಕಾ ವರಟಾಯತ್ತ ಕಲ ಹಂಸನಿವಹ ಕ್ರೌ ಯುಕ್ತ ಘನಸಾರ ಗಂಧಸಾರ ಕ ಸಂವಾಸಿತ ನಣಿಗ್ಗೇಹ ದೇಹಳೀ ನಿ ಗಳಂತಿಕಾ ವಿಕೀರ್ಯಮಾಣ ಸಲಿಲ ಧಾರಾ ವಿಪಣಿ ಮಾರ್ಗೋಪೇತ, ಮಹೋನ್ನ ಜಾಲರಂಧ್ರನಿರ್ಗತ ಕರ್ಪೂರ ಧೂ ಪಟಲ ಸಂದರ್ಶನ ಸಂಜಾತ ಜಲಧರ ವಿಭ್ರಾಂತ ಸಮುದ್ಗತ ಪಿಂಛ ನರ್ತನ ಮಾನ ಮತ್ತ ಮಯೂರ ಕೇಕಾರವ ಜ್ಜೈನ ಪುರವರಂಬು ಪ್ರವೇಶಿಂಚಿ ಗರಂಬುನ ವೇಂಚೇಯು ಸಮಯಂಬ

ಸೀಸಪದ್ಯವೆಂಬುದು ತೆಲುಗು ಒಂದು ವೈಶಿಷ್ಟ್ಯ. ಇದರ ಗತ್ತು ಗಳನ್ನು ಕುರಿತು ಪ್ರತ್ಯೇಕವಾದೊಂದು ಬರೆಯಬಹುದು. ಪೋತನ ಕವಿಯ ಪದ್ಯಗಳು ಆಂಧ್ರ ದೇಶದ ಮಹಾಜನ ಗೆಯಲ್ಲಿಂದಿಗೂ ನಲಿದುನರ್ತಿಸುತ್ತಿವೆ.

# ಸಪ್ತಗಿರಿ

## ಜಾಹೀರಾತು ದರಗಳು

| | |
|---|---|
| ಪೂರ್ತಿ ಪುಟ | ರೂ 500–00 |
| ಅರ್ಧಪುಟ | ರೂ 300–00 |
| ಕಾಲು ಪುಟ | ರೂ 150–00 |
| ಒಂದು ಕಾಲಂ | ರೂ 200–00 |

ಕೂಡಲೇ ಬರೆಯಿರಿ.

**ಸಂಪಾದಕರು, ಸಪ್ತಗಿರಿ**
ತಿರುಪತಿ.


ಪ್ರಿಯವಾದ ಗ್ರಂಥ ಆಂಧ್ರ ಭಾಗವತ. ಇದ ಕ್ಕಿಂತಲೂ ಕಾವ್ಯದ ಸಾರ್ಥಕ್ಯಕ್ಕೆ ಬೇರೆ ನಿದರ್ಶನ ಬೇಕಿಲ್ಲ.

ಸರಸ್ವತಿ ಸರ್ವಭಾಷಾಮಯಿ. ಭಾರತೀಯ ಭಾಷೆಗಳಲ್ಲಿ ಒಂದೊಂದೂ ಒಂದೊಂದು ರೀತಿ ಯಲ್ಲಿ ಸುಂದರವಾಗಿದೆ. ಯಾವುದೇ ಸಾಹಿತ್ಯದ ಗಳ ಸೌಂದರ್ಯ, ಉತ್ತಮ ಕಾವ್ಯಗಳ ಆನಂದ ಬೇಡವೆನ್ನುವುದು ಮೂರ್ಖತನವಾದೀತು. ಪೋತ ನನ ಭಾಗವತ ನಮ್ಮ ರಾಷ್ಟ್ರೀಯ ಸಂಪತ್ತು. ಭಾರತೀಯ ಸಾಹಿತ್ಯಶಾರದೆಯ ಕಿರೀಟದ ಲ್ಲಿರುವ ಅನರ್ಘ್ಯಮಾಣಿಕ್ಯ.

ಭಕ್ತ ಕವಿ ಪೋತನನ ಜೀವನಕ್ಕೂ, ವಾಗ್ಗೇಯ ಕಾರ ಶಿರೋಮಣಿ ತ್ಯಾಗರಾಜರ ಜೀವನಕ್ಕೂ ತುಂಬ ಸಾಮ್ಯವಿದೆ. ಇಬ್ಬರೂ ಇಬ್ಬರೂ ಧನ್ಯ ಜೀವಿಗಳು–ಸಾತ್ ನಿಲುಕದ ಸೌಂದರ್ಯ, ಮಾತಿಗೆ ಸಿ ಇಬ್ಬರ ಕೃತಿಗಳಲ್ಲೂ ಎದ್ದು ಕಾ

ಪೋತನ ಕವಿಯ ಭಾಗವ ಲಾಲಿತ್ಯಗಳನ್ನು ತೆರೆದ ಹೃದಯ ಬೇಕು. ಆ ಕೃಷ್ಣ ಭಕ್ತಿ ಜಲಧ ಧನ್ಯರಾಗಬೇಕು. ಆ ಕಾವ್ಯ ಮನೋಮಾಲಿನ್ಯವನ್ನು ದೂರ ಋಷಿಕವಿಯ ಸಂದೇಶ–ನಂದಾದ ಮಾರ್ಗದರ್ಶನ ನೀಡಲಿ.

★




ಓಂ ಶ್ರೀ ಮಾತ್ರೇ ನಮಃ    ದೂರವಾ

## ನವಶಕ್ತಿ ನಿಲಯದವರಿಂದ ಭಕ್ತರಿಗೆ ನವ ವಿಶಿಷ್ಟ ಕ

ಶ್ರೀ ಕಂಚಿ ಕಾಮಕೋಟಿ ಶ್ರೀ ಜಯೇಂದ್ರ ಸರಸ್ವತಿಸ್ವಾಮಿಗಳು, ಶ್ರೀ ತಿರುಮು ನಂದ ವಾರಿಯಾರ್ ಮೊದಲಾದ ಜಗದ್ಗುರು ಹಾಗೂ ಸಂತರಿಂದ ಆಶೀರ್ವದಿಸಲ್ಪ ವಸ್ತುಗಳ ತಯಾರಕರು.

ಬೆಲೆ ರೂಗಳಲ್ಲಿ

1. ಶ್ರೀ ಮಹಾಮೇರು ಪಂಚಲೋಹ (16×16, 10×10, 6×6. 4½×4½ c.m.) ಅಭ್ಯರ್ಥನೆಯ ಮೇರೆಗೆ.
2. ಮಹಾಲಕ್ಷ್ಮಿ ಮಹಾಯಂತ್ರ (64ದಳಗಳು 24×24c.m) 1000–00
3. ಸಪ್ತಸತಿ ಮಹಾನವಾವರಣಂ (64ದಳಗಳು 24×24 cm.) 1000–00
4. ಮಹಾಸುದರ್ಶನ ಮತ್ತು ಇತರ ಯಂತ್ರಗಳು (16×16c.m.) 500–00
5. ಶ್ರೀಚಕ್ರ (8×8 c.m.) 125–00
6. ಶ್ರೀಚಕ್ರ (5×5 cm) 50–00
7. ಸ್ವಯಂವರ (8×8 c.m.) 125–00
8. ಕಾರ್ತವೀರ್ಯಾರ್ಜುನ ,, 125–00
9. ಸರ್ವಜನಮನಧನಾಕರ್ಷಕ ಯಂತ್ರ(8×8C.M.) 125–00
10. ಅಷ್ಟಲಕ್ಷ್ಮಿಯಂತ್ರ ,, 125–00
11. ಮಹಾವಿಷ್ಣುಯಂತ್ರ ,, 125–00
12. ಮತ್ಸ್ಯಯಂತ್ರ ,, 125–00
13. ದಶಮಹಾವಿದ್ಯಾ (ಹತ್ತು–ಪ್ರತಿಒಂದಕ್ಕೆ)125–00
14. ಸ್ವರ್ಣಾಕರ್ಷಣ ಭೈರವರ್ (8×8 c.m)125–00
15. ಲಕ್ಷ್ಮೀಕುಬೇರ ,, 125–00
16. ಇತರ ಯಂತ್ರಗಳು(8×8cm.)125–00
17. ವಿದ್ಯುದೀಕೃತ ತಾಮ್ರದ ಬಳ
18. ಸುದರ್ಶನ (ಒಂದುಕಡೆ) ದೃಷ್ಟಿ ನಿವಾರಕ ಇನ್ನೊಂದು
19. ದೃಷ್ಟಿನಿವಾರಕ ಯಂತ್ರ (ಧ್ರೀವ
20. ಇತರ ಪದಕಗಳು(ಪ್ರತಿಯೊಂ
21. ಒಂದುಕಡೆ ಅಯ್ಯಪ್ಪ ಇನ್ನೊ ಅಯ್ಯಪ್ಪಸನ್ನಿಧಿ ಪ
22. ದತ್ತಾತ್ರೇಯಯಂತ್ರ (ವಾಹನಗಳ ತ್ರಿದೋಷನಿವಾರಣೆಗ
23. ಅಷ್ಟಟ ರುದ್ರಾಕ್ಷಮಾಲೆ ಹಾ ಮಾಲೆ 54 ಮಣಿಗಳದ್ದು.ಬೆಳ್ಳಿದಾರ
24. ತುಲಸೀ ಮಾಲೆ, ಕಮಲಮ (54 ಮಣಿಗಳು, ಬೆಳ್ಳಿದಾರ

ದೇವಾಲಯಗಳಿಗೆ ಹಾಗೂ ಮನೆಗಳಿಗೆ ಬೇಕಾದ ಎಲ್ಲ ಯಂತ್ರಗಳೂ ಪ್ರತಿಯೊಂದಕ್ಕೆ ರೂ 101ನಂತೆ ದೊರೆಯುತ್ತವೆ. ಬೇಡಿಕೆಗೆ ತಕ್ಕಂತೆ ಕಂಚಿನ ವಿಗ್ರಹಗಳು ದೊರೆಯುತ್ತವೆ.ಉಚಿತ ಕ್ಯಾಟಲಾಗಿಗಾಗಿ ಕೆಳಗಣ ವಿಳಾಸಕ್ಕೆ 50 ಪೈಸೆ ಅಂಚೆ ಚೀಟಿಯನ್ನು ಇಟ್ಟು ಬರೆಯಿರಿ.ವಿದೇಶೀ ಆರ್ಡರುಗಳಿಗೆ 25%ಅಧಿಕ. ದಯವಿಟ್ಟು ಬರೆಯಿರಿ (ಇಂಗ್ಲೀಷಿನಲ್ಲಿ ಮಾತ್ರ) :

ವಿಶ್ವಕರ್ಮಜ್ಞ ಶ್ರೀ ವಿದ್ಯಾ
**ಸ್ವಾಮಿಜೀ ಶ್ರೀ ಎಸ್. ಟಿ. ಮುರುಗ**
ಅಧ್ಯಕ್ಷರು ನವ
153, ಲಾಯ್ಡ್ಸ್ ರೋಡ್, ಗೋ
ಮದರಾಸು –

# ನಾಥದ್ವಾರದ ಶ್ರೀನಾಥ

ತದ ಇತಿಹಾಸದಲ್ಲಿ ಮಧ್ಯಯುಗೀನ
ಸಂಘರ್ಷದ ಕಾಲವೆಂದು ಕರೆಯಲಾ
ಅದರಲ್ಲಿ ಮೇವಾಡದ ಸಂಸ್ಕೃತಿ, ಜನ
ಧರ್ಮಶ್ರದ್ಧೆ ಇವುಗಳನ್ನು ಕುರಿತು
ಮಾಡತೊಡಗಿದಾಗ ಅನೇಕ ರೋಮಾಂ
ಘಟನೆಗಳು ಗೋಚರಿಸುತ್ತವೆ.

ಂಠ ಧರ್ಮದ ಸಂಸ್ಕೃತಿ ಕೇಂದ್ರವಾಗಿ
ಾರತದಲ್ಲಿ ತಿರುಪತಿಗೆ ಅಗ್ರಸ್ಥಾನವು
ೆ, ಈ ತಿರುಪತಿಯ ನಂತರ ಆರ್ಥಿಕವಾಗಿ,
ಾಜಿಕವಾಗಿ, ಸಾಂಸ್ಕೃತಿಕವಾಗಿ, ಉತ್ತರ
ದಲ್ಲಿ ನಾಥದ್ವಾರ ಕ್ಷೇತ್ರವು ದ್ವಿತೀಯ
ನ್ನು ಹೊಂದಿದೆ. ತಿರುಮಲೆಯ ಶ್ರೀನಿ
ಂತೆ ನಾಥದ್ವಾರದ ಶ್ರೀನಾಥನ ಭಕ್ತ
ಗಣನೀಯ ಪ್ರಮಾಣದಲ್ಲಿದೆ.

ಧ್ರದ ಕಾಕಿನಾಡಾ ನಿವಾಸಿಗಳಾಗಿದ್ದ
ಭಟ್ಟರು ಕುಟುಂಬಸಮೇತರಾಗಿ ಉತ್ತರ
ದ ಯಾತ್ರೆಯನ್ನಾರಂಭಿಸಿದಾಗ ಚಂಪಾ
ಲ್ಲಿ ಬಿಡಾರ ಮಾಡಿದ್ದರು. ವೈಶಾಖ ಕೃಷ್ಣ
ಶಿ 1535 ರಂದು ಈ ದಂಪತಿಗಳಿಗೆ ಗಂಡು
ಹುಟ್ಟಿತು. ಮೃತಾವಸ್ಥೆಯಲ್ಲಿ ಜನಿಸಿದೆ
ಭಾವನೆಯಿಂದ ಆ ಮಗುವನ್ನು ಎಲೆಯಲ್ಲಿ
ಲಾಗಿತ್ತು. ಬೆಳಗಿದ್ದು ನೋಡಿದರೆ ಆ ಮಗು
ುತ್ತಲೂ ದಿವ್ಯಾಗ್ನಿಯು ಕಾಣಿಸುವಂತಾ
, ಆದುರಿಂದಲೇ "ವಲ್ಲಭೋಹ್ಯಾಗ್ನಿ
ಕ್ಯಾತ್" ಎಂದರು.ಅಗ್ನಿ ದೇವನ ಅಂಶದಿಂದ
ದ ಈ ಬಾಲಕನು ಮುಂದೆ ವಲ್ಲಭಚಾರ್ಯ
ಹೆಸರಿನಿಂದ ಖ್ಯಾತರಾಗುವಂತಾಯಿತು.

ತ್ತರ ಭಾರತವು ಪುಣ್ಯ ಪ್ರವಾಹಗಳನಾಡೆನಿ
ದಕ್ಷಿಣಭಾರತವು ದಾರ್ಶನಿಕರಿಂದ ಸಮಗ್ರ
ತಕ್ಕೆಲ್ಲ ತಮ್ಮ ಜ್ಞಾನಗಂಗೆಯನ್ನು ಹರಿಸಿದ
ಂದು ಕರೆಸಿಕೊಂಡಿದೆ. ಶಂಕರ, ರಾಮಾ
, ಮಧ್ವರಂತೆ ವಲ್ಲಭಾಚಾರ್ಯರಾದರೂ
ದಕ್ಷಿಣ ಭಾರತದ ಕೊಡುಗೆಯಾಗಿ ಉತ್ತ
ತಮ್ಮ ಸಿದ್ಧಾಂತದ ಪ್ರಚಾರವನ್ನು ಗೈದರು.

ಂಪಾರಣ್ಯದಲ್ಲಿ ಈ ಮಗು ಜನಿಸಿದಕಾಲಕ್ಕೆ
ಾಗಿ ಮಥುರಾ ವೃಂದಾವನದಲ್ಲಿರುವ ಗಿರಿ
ಪರ್ವತದಲ್ಲಿ ಶ್ರೀನಾಥನ ಪ್ರಾದುರ್ಭಾವ
ಯಿತು, ಆದುದರಿಂದ ವಲ್ಲಭ ಸಂಪ್ರದಾಯ
ಗಳು ಸ್ವಾಮಿ ಹಾಗೂ ಸೇವಕ ಇವರಿಬ್ಬರ
ತಾರವಾದುದು ಒಂದೇದಿನ ಎಂಬ ನಂಬಿಕೆ
ಟ್ಟು ಕೊಂಡು ಬಂದಿದ್ದಾರೆ.

ವಲ್ಲಭಚಾರ್ಯರು ಮಾಧವೇಂದ್ರಪುರಿ ಎಂಬ
ಕನೀಯರಲ್ಲಿ ಸಕಲಶಾಸ್ತ್ರಗ್ರಂಥಗಳನ್ನು
ಭ್ಯಾಸಮಾಡಿದರು.ನಂತರ ಸಮಗ್ರ ಭಾರತವನ್ನು
ಮೂರುಸಲ ಸಂಚರಿಸಿ ಪುಷ್ಟಿಮಾರ್ಗವನ್ನು
ಪ್ರಚಾರಮಾಡಿದರು. ಶಿಷ್ಯಪರಿವಾರವನ್ನು ಸಂಗ್ರ
ಹಿಸಿದರು. ಆಚಾರ್ಯರು ಅಂದು ಮರೆಯಲಾ
ಗದ ಮಹಾ ಸಾಮ್ರಾಜ್ಯವೆನಿಸುತ್ತಿದ್ದ ವಿಜಯ
ನಗರ ಕೃಷ್ಣದೇವರಾಯನ ಆಸ್ಥಾನಕ್ಕೆ ಭೇಟಿ
ಯನ್ನಿತ್ತು ತಮ್ಮ ವಿದ್ವತ್ಪ್ರಭೆಯಿಂದ ಪ್ರಭು ಎಂಬ
ಗೌರವಕ್ಕೆ ಪಾತ್ರರಾದರೆಂದು ಅವರ ಜೀವನ
ಚರಿತ್ರೆಯಿಂದ ತಿಳಿದು ಬರುವುದು.

ಶ್ರೀ ವಲ್ಲಭರು ತಮ್ಮ ಜೀವಿತಕಾಲದಲ್ಲಿ ಎರ
ಡನೆಯ ಸಲ ಭಾರತ ಸಂಚಾರವನ್ನಾರಂಭಿಸಿದಾಗ
ಶ್ರೀಕೃಷ್ಣನ ಬಾಲ್ಯಜೀವನಲೀಲಾ ವಿನೋದ
ಗಳ ಕೇಂದ್ರವೆನಿಸಿದ ಮಥುರಾ ವೃಂದಾವನ
ಗೋಕುಲಗಳಿಗೆ ಭೇಟಿಯನ್ನಿತ್ತರು. ಗೋವರ್ಧನ
ಧಾರಿಯಾದ ಸ್ವಾಮಿಯನ್ನು ಕಂಡು ಕೃತಾರ್ಥ
ರಾದರು. ತಿರುಪತಿಯ ಶ್ರೀನಿವಾಸನ ಚರಿತ್ರೆ
ಯಲ್ಲಿ ಹಸು ಹುತ್ತಿನ ಮೇಲೆ ಹಾಲುಗರೆದಂತೆ ಈ
ನಾಥನ ವಿಗ್ರಹದ ಮೇಲೂ ಪ್ರತಿದಿನ ಹಾಲು
ಕರೆಯುತ್ತಿತ್ತೆಂದು ತಿಳಿದುಬರುವುದು. ಆಚಾ
ರ್ಯರು ಶ್ರೀನಾಥನನ್ನೆ ತಮ್ಮ ಆರಾಧ್ಯದೈವ
ವಾಗಿ ಪೂಜಿಸತೊಡಗಿದರು, ಶಿಷ್ಯರಿಗೆಲ್ಲ ಆತನ
ಪೂಜಾವಿಧಾನಗಳ ಪದ್ಧತಿಯನ್ನು ಹಾಕಿಕೊ
ಟ್ಟರು. ನವವಿಧ ಭಕ್ತಿಯೇ ಆ ದೇವನ ಪೂಜೆಯ
ಮುಖ್ಯವಾದ ಅಂಗವೆಂಬುದನ್ನು ತೋರಿಸಿ
ಕೊಟ್ಟರು.

ಪಂಜಾಬದ ನಿವಾಸಿಗಳಾದ ಪೂರಣಮಲ್ಲ
ಎಂಬುವವರಿಗೆ ಸ್ವಪ್ನದಲ್ಲಿ ಸ್ವಾಮಿಯು ಕಾಣಿಸಿ
ಕೊಂಡು ತಾನು ಗಿರಿವ್ರಜದಲ್ಲಿ ಪ್ರಕಟನಾಗಿದ್ದು
ತನಗಾಗಿ ಮಂದಿರವನ್ನು ಕಟ್ಟಿಸುವಂತೆ ಸೂಚನೆ
ಯನ್ನು ಮಾಡಿದ ಶ್ರೀಕೃಷ್ಣಭಕ್ತರಾದ ಪೂರಣ
ಮಲ್ಲ ವೃಂದಾವನಕ್ಕೆ ಬಂದು ಆಚಾರ್ಯರಿಗೆ
ತಮ್ಮ ಸ್ವಪ್ನ ವೃತ್ತಾಂತವನ್ನು ತಿಳಿಸಿ ಅವರಿಂದ
ಅಪ್ಪಣೆ ಪಡೆದು ದೇವಮಂದಿರದ ನಿರ್ಮಾಣ
ಕಾರ್ಯದಲ್ಲಿ ತೊಡಗಿದರು.

ಗೋವರ್ಧನಧಾರಿಯಾದ ಈ ದೇವನನ್ನು
ಮೊದಲು ಬಂಗಾಲಿಗಳು ಪ್ರತಿದಿನವೂ ಅಷ್ಟ
ಪೂಜಾ ವಿಧಾನದಿಂದ ಪೂಜಿಸುತ್ತಿದ್ದರು. ಮುಂದೆ
ಅವರಲ್ಲಿ ಕೆಲವರು ದೇವಿಯ ಪೂಜೆಯನ್ನೂ
ಆರಂಭಿಸಿದರು. ಇದು ಶ್ರೀಕೃಷ್ಣನಿಗೆ ಭಕ್ತ
ರಿಗೆ ಬರಲಿಲ್ಲ. ಅವರನ್ನು ಇವ
ಆಚಾರ್ಯದಿಂದ ಬಹುಕುಶಲತೆಯಿಂದ
ದರು, ಹದಿನೇಳು ವರುಷಗಳಕಾಲ ಅವ್ಯಾ
ವಾಗಿ ಪ್ರಯತ್ನದಿಂದ ಪೂರಣಮಲ್ಲರು ದೆ
ಮಂದಿರವನ್ನು ನಿರ್ಮಿಸಿದರು, 1564 ರ ಕಾ
ವಧಿಯಲ್ಲಿ ಆ ಮಂದಿರವು ಒಂದು ಹಂತಕ್ಕೆ
ವಂತಾಯಿತ, ನಂತರ ಆಚಾರ್ಯರು ಕಾ
ಪ್ರಯಾಣ ಮಾಡಿ ಸಂನ್ಯಾಸಸ್ವೀಕಾರಮ
ದರು, 1638 ರ ಸುಮಾರಿನಲ್ಲಿ ಈ ಮಹ
ಯರು ಗಂಗಾ ಪ್ರವಾಹದಲ್ಲಿಯೇ ತಮ್ಮ ದ
ವನ್ನು ತ್ಯಾಗಮಾಡಿದರು ಆಗ ಅವರಿಗೆ ಐ
ರಡು ವರುಷ, ಎರಡುತಿಂಗಳು, ಏಳುದಿನ
ಗಿದ್ದವೆಂದು ಅವರ ಜೀವನ ಚರಿತ್ರೆಯಿಂದ ತಿ
ಬರುವುದು.

ವಲ್ಲಭಾಚಾರ್ಯರಿಂದ ಪ್ರಣೀತವಾದ ಶು
ದ್ವೈತ ಅಥವಾ ಪುಷ್ಟಿ ಮಾರ್ಗದ ಶಿಷ್ಯವೃಂ
ದ್ವಾರಕಾ, ಗೊಂಡ, ಕಾಠೆಯವಾಡ, ಗುಜ
ಮಗಧ– ಈ ಭಾಗದಲ್ಲಿ ಸಾಕಷ್ಟು ಪ್ರಮಾ
ಬೆಳೆದು ಬರುವಂತಾಗಿತ್ತು. ಆಚಾಯ
ಸನ್ಯಾಸಾಶ್ರಮ ಪೂರ್ವದಲ್ಲಿ ಏಳುಜನ
ಮಕ್ಕಳು ಜನಿಸಿದ್ದರು ಮುಂದೆ ಈ ಏಳು



ಶ್ರೀ ಆದ್ಯರಾಮಾಚಾರ್ಯ

ಕೋಟಾ, ನಾಥದ್ವಾರ, ಕಾಂಕ್ರೋಲಿ, ಗೋಕುಲ ಹಾಗೂ ಕಾಮಾದಲ್ಲಿ ಎರಡು, ಸೂರತದಲ್ಲಿ ಒಂದು ಹೀಗೆ ಏಳು, ಆಧ್ಯಾತ್ಮಪೀಠಗಳನ್ನು ಸ್ಥಾಪಿಸಿ ಪುಷ್ಟಿಮಾರ್ಗದ ಪ್ರಚಾರಕಾರ್ಯದಲ್ಲಿ ನಿರತರಾದರು

ಶ್ರೀವಲ್ಲಭಾಚಾರ್ಯರ ಕಾಲದಲ್ಲಿ ದಿಲ್ಲೀಶನಾದ ಅಕಬರ ಬಾದಶಹನಿಂದ ಅನೇಕ ದಾನಪತ್ರಗಳು ಈ ಪೀಠಕ್ಕೆ ಕೊಡಮಾಡಲ್ಪಟ್ಟಿದ್ದವು, ಮುಂದೆ ಆತನ ಮೊಮ್ಮಗನೆಂದೆನಿಸಿ ಕೊಂಡ ದಾರಾಶಿಕೋಹನಂತೂ ಶ್ರೀಕೃಷ್ಣನ ಪರಮ ಭಕ್ತನೆಂದು ಗುರುತಿಸಲ್ಪಡುತ್ತಿದ್ದ. ಈ ಕಾಲಾವಧಿಯಲ್ಲಿಯೇ ಗೀತಾಗ್ರಂಥವು ಫಾರ್ಶಿಭಾಷೆಗೆ ತರ್ಜುಮೆಗೊಂಡಿತು. ದಾರಾ ತನ್ನ ಬೆರಳಿನಲ್ಲಿ "ಪ್ರಭು" ಎಂಬ ಹೆಸರನ್ನು ಕೆತ್ತಿದ ಉಂಗುರವನ್ನು ಧರಿಸುತ್ತಿದ್ದ, ಹಿಂದೂ ಮಹಮ್ಮದೀಯ ಧರ್ಮದಲ್ಲಿ ಐಕ್ಯವನ್ನು ಸಾಧಿಸಲು ಸಾಗರಸಂಗಮ ಎಂಬ ಗ್ರಂಥವನ್ನು ಸ್ವತಃ ರಚಿಸಿದ ಮುಂದೆ ಈ ಗ್ರಂಥವು ಸಂಸ್ಕೃತಭಾಷೆಗೆ ತರ್ಜುಮೆಗೊಳ್ಳುವಂತಾಯಿತು (ಬಿಕಾನೇರಿನ ಸಂಸ್ಕೃತ ಗ್ರಂಥಾಲಯದಲ್ಲಿ ಈ ಗ್ರಂಥವಿದೆ) ಕೇಶವನ ದೇವಮಂದಿರದ ಮುಂಭಾಗದಲ್ಲಿ ಬಂಗಾರದ ಗರುಡಗಂಬವನ್ನು ನಿಲ್ಲಿಸುವಂತೆ ಮಾಡಿದವನು ದಾರಾ ಶುಕೋಹ ಎಂದೆನಿಸಿ ಕೊಳ್ಳುತ್ತಾನೆ.

ಔರಂಗಜೇಬನು ಸಾಮ್ರಾಟನಾದ ನಂತರ ಹಿಂದೂ ಧರ್ಮಕ್ಕೆ ದೊಡ್ಡ ಅಡಚಣೆ ಉಂಟಾಯಿತು. ಈ ವಿಪ್ಲವಕಾಲದಲ್ಲಿ ಎಲ್ಲರ ಗಮನವು ಮೇವಾಡದ ರಾಣಾಗಳತ್ತ ಹರಿಯಿತು. ಅವರು ಹಿಂದೂ ಧರ್ಮನಿಷ್ಠ ಪ್ರಭುಗಳೆಂದು ಜಿಯಾ ಕರವನ್ನು ಕೊಡಲು ವಿರೋಧಿಸಿದವರೆಂದೂ ಕರೆಸಿಕೊಳ್ಳುತ್ತಿದ್ದರು. ಇದರಿಂದಾಗಿ ದಿಲ್ಲೀಶ್ವರರಿಗೆ ಎಂದೂ ತಲೆಬಾಗುವವರಲ್ಲ ಎಂಬ ನಂಬಿಕೆ ಪ್ರಜೆಗಳ ಮನದಲ್ಲಿ ಬೇರೂರುವಂತಾಗಿತ್ತು, ಈ ಎಲ್ಲ ಕಾರಣಗಳಿಂದ ಶ್ರೀನಾಥನ ವಿಗ್ರಹವನ್ನು ಮೇವಾಡದತ್ತ ಸ್ಥಳಾಂತರಿಸುವುದೇ ವಿಹಿತವೆಂಬ ನಿರ್ಧಾರಕ್ಕೆ ಬರುವಂತಾದರು

ಈ ಎಲ್ಲ ಕಾರ್ಯಗಳು ಅತ್ಯಂತ ವ್ಯವಸ್ಥಿತವಾಗಿ ಗುಪ್ತ ರೀತಿಯಲ್ಲಿಯೇ ನಡೆಯ ಬೇಕಾಗಿತ್ತು. ಆದುದರಿಂದ ಬಡೆದಾವೂಜಿಯವರು ಈ ಕಾರ್ಯಕ್ಕಾಗಿ ತಮಗೆ ಅತ್ಯಂತ ವಿಶ್ವಾಸಕರೆಂದೆನಿಸಿದ ಒಂದು ಸಂಗಡವನ್ನೆ ಸಿದ್ಧ ಪಡಿಸಿಕೊಂಡರು. ಶ್ರೀನಾಥನೊಂದಿಗೆ ಗೋಕುಲದಲ್ಲಿದ್ದ "ನವನೀತ ಪ್ರಿಯಾ" ಎಂಬ ದೇವನನ್ನೂ ಕೂಡ ಸಂಗಡ ತೆಗೆದುಕೊಂಡು ಹೋಗುವುದಾಗಿ ನಿರ್ಧಾರ ಮಾಡಿದರು.

ವ್ರಜಭೂಮಿಯಿಂದ ಹೊರಟ ಈ ಭಕ್ತರ ಗುಂಪು ತಮ್ಮ ದೇವನೊಂದಿಗೆ ಒಂದು ತಿಂಗಳು ಆಗ್ರಾದಲ್ಲಿಯೇ ಕಳೆಯಿತು, ಅನಂತರ ಇನ್ನಾರು ಯಾರಿಗೂ ತಿಳಿವು ಸಿಗದಂತೆ ಚಂಬಲ್ ನದಿಯನ್ನು ದಾಟಿದರು ಕೃಷ್ಣಪುರಾರ ಎಂಬ ಸ್ಥಳಕ್ಕೆ ಬಂದು ತಲುಪಿದರು, ನಾಲ್ಕು ತಿಂಗಳು ಅಲ್ಲಿಯೇ ಇದ್ದು ಕೊಂಡು ಮುಂದಿನ ಪ್ರಯಾಣದ ಅಡಚಣೆಗಳನ್ನೆಲ್ಲ ಪರೀಕ್ಷೆ ಮಾಡಿದ ನಂತರ ಸುರಕ್ಷಿತವಾಗಿದೆ ಎಂದು ತಿಳಿದು ಬಂದಾಗ ಕೃಷ್ಣಶಿಲಾ ಎಂಬ ಸ್ಥಳಕ್ಕೆ ಬಂದರು, ಆ ಸಮಯದಲ್ಲಿ ಅನಿರುದ್ಧ ಹಾಡಾ ಎಂಬುವವನು ರಾಜ್ಯವಾಳುತ್ತಿದ್ದ ಆತನು ಪರಿವಾರ ಸಮೇತನಾಗಿ ಬಂದು ಸ್ವಾಮಿಯ ದರ್ಶನವನ್ನು ಪಡೆದುಕೊಂಡು, ಅಲ್ಲಿಯೇ ಸ್ಥಿರವಾಗಿ ನಿಲ್ಲಲು ಕೇಳಿಕೊಂಡ, ಬಡೇದಾವೂಜಿಗೆ ಆ ಸ್ಥಳ ಆಗ್ರಾಕ್ಕೆ ಸಮೀಪವೆನಿಸಿತು, ಆದುದರಿಂದ ಅವರು ತಮ್ಮ ದೇವನೊಂದಿಗೆ ಪುಷ್ಕರಕ್ಷೇತ್ರಕ್ಕೆ ಬಂದು ತಲುಪಿದರು, ಮುಂದೆ ಜೋಧಪುರ ಮಾರ್ಗವಾಗಿ ಹೊರಟು ಕಿಶನಗಡಕ್ಕೆ ಬಂದು ಬಿಡಾರವಮಾಡಿದರು. ಅಲ್ಲಿಂದ ಪುನಃ ಅವರ ಪ್ರಯಾಣವು ಮುಂದುವರಿಯಿತು. ಚೌಪಾಸನಿ ಎಂಬ ಸ್ಥಳಕ್ಕೆ ಬಂದು ಚಾತುರ್ಮಾಸ್ಯ ವ್ರತವನ್ನು ಕಳೆದರು. ಈ ಪ್ರವಾಸದ ಕಾಲಾವಧಿಯಲ್ಲಿಯೂ ಸಹ ದೇವನಿಗೆ ಎಂದಿನಂತೆ ನಿತ್ಯ ಅಷ್ಟಪೂಜಾದಿ ಭೋಗಗಳು ನಡೆಯುತ್ತಿದ್ದವು.

ಗೋವಿಂದ ಮಹಾರಾಜರು ಒಂದು ಸಲ ಮೇವಾಡದ ಮಹಾರಾಣಾ ರಾಜಸಿಂಹರನ್ನು ಭೇಟಿಯಾಗಿ ಬಂದರು. ಮಹಾರಾಜರ ಅಪೇಕ್ಷೆಯಂತೆ ಅವರು ಶ್ರೀನಾಥನೊಂದಿಗೆ ಮೇವಾಡಕ್ಕೆ ಪ್ರಯಾಣಬೆಳೆಸಿದರು. ದಾರಿಯುದ್ದಕ್ಕೆ ಪ್ರಜೆಗಳು ಶ್ರೀನಾಥನಿಗೆ ವೈಭವದ ಸ್ವಾಗತವನ್ನು ಕೋರಿ ಉತ್ಸವ ನಡೆಸಿದರು. "ಸಿಂಹಾಡ" ಎಂಬ ಸ್ಥಳದಲ್ಲಿ ಈ ದೇವನರಥವು ಚಲಿಸದೆ ನಿಂತು ಹೋಯಿತು. ಬಹುಕಾಲದ ಹಿಂದೆ(ನೂರಿಪ್ಪತ್ತೈದು ವರುಷ) ಮೇವಾಡದ ಅರಸರ ಸ್ವಪ್ನದಲ್ಲಿ ಶ್ರೀನಾಥನು ತಾನು ಇದೇ ಸ್ಥಾನದಲ್ಲಿ ವಿರಾಜಮಾನನಾಗುವೆ ಎಂಬ ಸೂಚನೆಯಿತ್ತಿದ್ದನಂತೆ, ಅದೇ ಸ್ಥಳದಲ್ಲಿ ಬನಾಸನದಿಯು ಉತ್ತರ ವಾಹಿನಿಯಾಗಿ ಮಂದಗತಿಯಿಂದ ಹರಿಯುತ್ತಿತ್ತು. ದಟ್ಟವಾದ ಕಾಡು, ಸುತ್ತಲೂ ಅಭೇದ್ಯವಾದ ಆರಾವಲಿ ಪರ್ವತಗಳು, ಕೋಟೆಯಗೋಡೆಗಳಂತೆ ಮೇಲೆ ನಿಂತಂತೆ ತೋರುತ್ತಿದ್ದವು. 1728 ಫಾಲ್ಗುಣ ಶುದ್ಧ ಸಪ್ತಮಿಯ ಶುಭದಿನದಂದು ಬಡೇದಾವೂಜಿಯವರಿಂದ (ದಾಮೋದರದಾಸಜಿ) ಶ್ರೀನಾಥನ ವಿಗ್ರಹವನ್ನು ಅದೇ ಸ್ಥಳದಲ್ಲಿ ಪ್ರತಿಷ್ಠಾಪಿಸಲಾಯಿತು. ಕಾಲಾಂತರದಲ್ಲಿ ಶ್ರೀನಾಥನು ಬಂದು ವಾಸಮಾಡಿದ ಈ ತಾಣವನ್ನು ಆತನ ಭಕ್ತರು ನಾಥದ್ವಾರ ಎಂಬ ಕರೆಯತೊಡಗಿದರು.

ವ್ರಜಭೂಮಿಯಿಂದ ಬಂದು ನೆಲೆ
ಥನಿಗೆ 1834 ರವರೆಗೆ ಈ ಸ್ಥಳವು
ನೆನಿಸಿತು. ಈ ಕಾಲದಲ್ಲಿ ಸಾವಿರಾರು
ಶಿಷ್ಯರು, ಭಕ್ತರು, ದೇವನ ದರ್ಶನ
ಬಂದು ಹೋಗತೊಡಗಿದರು. ಅಷ್ಟ
ಆಲ್ಲ ದಿನಗಳೆಂತೆಲ್ಲ ಪ್ರಶಸ್ತಿ ಕವ
ವಂತಾದವು, ಆದರೆ ಮುಂದೆ ಪೂ
ನಾಗಪುರದ ಭೋಸಲೇ ಇವರ
ಸಿಂಧೇ ಹೋಳಕರ ಇವರ ಪ್ರಭಾ
ಭಾರತದಲ್ಲಿ ಬೆಳೆಯತೊಡಗಿತು,
ಬಸವಂತರಾವ್, ಸಿಂಧೆಯು ಮೇಲೆ ಆ
ಮಾಡಿದ, ಯುದ್ಧದಲ್ಲಿ ಸಿಂಧೆ
ಯಿತು, ಆತನು ತಲೆಮರೆಸಿಕೊಳ್ಳಲು
ಗವಿಸಿದ, ಆದರೆ ಸೈನ್ಯವು ಆತ
ಟ್ಟಿತು. ಸಿಂಧೆ ತನಗೆ ಮೂರಲಕ್ಷ
ಅನ್ನು ಸಂದಾಯಮಾಡುವಂತೆ
ಅಧಿಕಾರಿಗಳಿಗೆ ಕೇಳತೊಡಗಿದ. ಈ
ರವು ಮಹಾರಾಣಾ ಭೀಮಸಿಂಹ
ಬಂದಿತು, ತಕ್ಷಣವೇ ಕ್ಷೇತ್ರವನ್ನು
ನಿಂದ ಸೇನೆ ಕಳುಹಿಸಲಾಯಿತು. ಈ
ದಲ್ಲಿ ರಾಣಾ ಶ್ರೀನಾಥನನ್ನು
ಸಮೀಪದ ಶ್ರೀಗೊಂಡಾ ಎಂಬ ಪ
ಷ್ಠಾಪಿಸುವಂತೆ ನೋಡಿಕೊಂಡ. ನಾ
ವಂತೆಯೇ ಈ ಗುಡ್ಡದ ಆಶ್ರಯದಲ್ಲಿ
ದೇವಾಲಯವನ್ನು ಕಟ್ಟಿಸಲಾಯಿ
ವರುಷಗಳ ಕಾಲ ಶ್ರೀನಾಥನ ವಿಗ್ರ
ಸ್ಥಳದಲ್ಲಿಟ್ಟು ಪೂಜೆಮಾಡುತ್ತಲಿದ್ದ
ವಾತಾವರಣವು ನಿರ್ಮಲವಾದ
ನಾಥದ್ವಾರಕ್ಕೆ ಇ ವಿಗ್ರಹವ
ಪ್ರತಿಷ್ಠಾಪಿಸಲಾಯಿತು.

ಇಂದು ನಾಥದ್ವಾರದಲ್ಲಿ ನಾವು
ನಾಥನ ದೇವ ಮಂದಿರಕ್ಕೆ ಭಾರ
ಲಯಗಳ ಶಿಲ್ಪಕಲಾ ವಿನ್ಯಾ
ಹೊರನೋಟಕ್ಕೆ ಅದೊಂದು ರಾಜ
ಕಾಣಬರುತ್ತದೆ. ಗೋಪುರಗಳಾ
ಶಿಲ್ಪಗಳಿರುವ ದ್ವಾರಪಾಲಕರ
ನಾವು ಅಲ್ಲಿ ಕಾಣಲಾರೆವು. ಇ
ಕಾರಣ ಅಂದಿನ ರಾಜಕೀಯ ಪ
ಹೇಳಬೇಕಾಗುವುದು. ಶ್ರೀನಾಥ
ಮಂಟಪದ ಮೇಲ್ಭಾಗದಲ್ಲಿ ಚಕ್ರ
ಹೆಸರಿನ ಗೋಪುರವಿದೆ. ಆದರೆ
ಭಾಗದಿಂದ ಯಾರಿಗೂ ಕಾಣಿಸಿ
ಗೋಪುರದಲ್ಲಿ ಸುದರ್ಶನ ಚಕ್ರ
ಆದನ್ನು ಚಕ್ರರಾಜ ಎಂದು ಕರೆ

ಮೇಲೆ ಏಳು ಧ್ವಜಗಳಿವೆ. ವಲ್ಲಭ ಸಂಪ್ರ ಇನ್ನುಳಿದ ಏಳು ಕೇಂದ್ರಗಳಲ್ಲಿ ಈ ುವುದಿಲ್ಲ. ನಾಥದ್ವಾರ ಪುಷ್ಟಿಮಾರ್ಗದ ಕೇಂದ್ರವಾದುದರಿಂದ ಆ ಏಳೂ ಧ್ವಜ ನಾವು ಇಲ್ಲಿಯೇ ಕಾಣಬಹುದು. ಈ ್ರ ಯಾರೂ ಸ್ಪರ್ಶಮಾಡಲಾರದಂತೆ ುಚಿಯಾಗಿಟ್ಟಿರುತ್ತಾರೆ. ಹಕ್ಕಿಗಳೂ ಕೂಡ ಮೇಲೆ ಕೂಡಲಾರದಂತೆ ವ್ಯವಸ್ಥೆಮಾಡಿ ಮೇಲುಭಾಗದವರೆಗೆ ಹೋದ ಯಾತ್ರಿಕರು ಂದಲೇ ಚಕ್ರರಾಜನ ದರ್ಶನ ಪಡೆದು ಬರುವ ಸಂಪ್ರದಾಯವಿದೆ.

ಥದ್ವಾರ ದೇವ ಮಂದಿರವನ್ನು ಪ್ರವೇಶ ು ಮೂರು ಮಾರ್ಗಗಳಿವೆ. ಮೊದಲನೇ ಚೌಪಾಟಿಯಿಂದ ಬರುತ್ತದೆ, ಇದೇ ್ವಾರವಾಗಿದೆ, ಎರಡನೆಯ ಮಾರ್ಗವು ಯತನ ಅಂದರೆ ವಲ್ಲಭ ಪೀಠಸ್ಥರು ವಾಸ ುವ ಮನೆಯ ಏಳುಭಾಗದಿಂದ ಬರಬಹು . ಮೂರನೆಯ ಮಾರ್ಗವನ್ನು ಪ್ರೀತಮ ಎಂಬ ಹೆಸರಿನಿಂದ ಕರೆಯುತ್ತಾರೆ, ಇದು ಡಿಯ ಹಿಂಭಾಗದಿಂದ ಪಾಕಶಾಲೆಯ ಲ್ಲಿ ಹಾದುಬರುತ್ತದೆ. ಸಭಾಮಂಟಪದಲ್ಲಿ ಕೊಂಡೇ ದೇವನದರ್ಶನ ಮಾಡುತ್ತಾರೆ. ಾಗದಲ್ಲಿ ಅರ್ಚಕರು ಹಾಗೂ ತಿಲಕಾಯುತ ಮಾತ್ರ ಪ್ರವೇಶವಿರುತ್ತದೆ.

ಂದು ಬದಿಯಲ್ಲಿ ತಿಲಕಾಯುತನರ ವಾಸದ ರವಿದ್ದರೆ ಇನ್ನೊಂದು ಬದಿಯಲ್ಲಿ ಪಾಕಶಾಲೆ ಾಲೆ, ದೇವನಿಗೆ ಭಕ್ತರಿಂದ ಕೊಡಲ್ಪಡುವ ್ರ, ಹಣ್ಣು, ಹಾಲು, ಮೊಸರು ಮೊದಲಾ ಳನ್ನು ಶೇಖರಿಸಿಡುವ ಭಾಗಗಳಿವೆ. ಮಧ್ಯ ದಲ್ಲಿ ಶ್ರೀನಾಥನ ವಿಗ್ರಹವಿದೆ. ಆ ವಿಗ್ರಹದ ಭಾಗದಲ್ಲಿ ಸಭಾಮಂಟಪವಿದೆ. ಅಲ್ಲಿಯೇ ಗೂ ದರ್ಶನವಾಗುವಂತೆ ವ್ಯವಸ್ಥೆಯನ್ನು ಡಲಾಗಿದೆ. ತಿರುಪತಿಯಂತೆ ಈ ದೇವನಿಗೂ ದಿನ ಷಡ್ರಸಾನ್ನ ಭೋಜನದ ನೈವೇದ್ಯಗಳಾ ವೆ. ಅವುಗಳನ್ನು ಹೊರಭಾಗದಲ್ಲಿ ನಾವು ುಕೊಳ್ಳಬಹುದು. ಇಲ್ಲಿಯ ಪದಾರ್ಥಗಳೆಲ್ಲ ತುಪ್ಪದಲ್ಲಿಯೇ ಮಾಡಿದವುಗಳಾಗಿರುತ್ತವೆ, ರ ಪಚ್ಚಕರ್ಪೂರ, ಯಾಲಕ್ಕಿ ಮೊದಲಾದವು ನ್ನು ಪುಡಿಮಾಡಲು ಬಂಗಾರದ ಹಾಗೂ ಯ ಬೀಸುವ ಕಲ್ಲುಗಳಿವೆ. ದೇವನಿಗರ್ಪಿತವಾದ ಗಳಿಂದ ಸುಗಂಧತೈಲವನ್ನು ತೆಗೆಯುತ್ತಾರೆ, ಾಬಿಯನ್ನು ಬೆಳೆಯಲು ಪ್ರತ್ಯೇಕವಾದ ವಸ್ಥೆಯನ್ನೇ ಮಾಡಲಾಗಿದೆ. ಪ್ರತಿ ಅರ್ಧಘಂಟೆ ವೆಷ್ಟು ಈ ದೇವನ ದರ್ಶನವಾಗುತ್ತದೆ. ಸಮಯ ದರ್ಭಾನುಸಾರಕ್ಕೆ ತಕ್ಕಂತೆ ದೇವನನ್ನು ನಾನಾ ಲಂಕಾರಗಳಿಂದ ಪೂಜೆಮಾಡುತ್ತಾರೆ. ಅದನ್ನು ನೋಡುವುದೇ ಕಣ್ಣುಗಳಿಗೆ ಹಬ್ಬವಾಗುತ್ತದೆ.

ಶ್ರೀ ವಲ್ಲಭಾಚಾರ್ಯರ ಸಿದ್ಧಾಂತವನ್ನು ಶುದ್ಧಾದ್ವೈತ ಇಲ್ಲವೆ, ಪುಷ್ಟಿ ಮಾರ್ಗ ಸಂಪ್ರದಾಯವೆಂದು ಕರೆಯುವುದುಂಟು. ಇವರಿಗೆ ಶ್ರೀಕೃಷ್ಣನೇ ಪರಮ ದೈವ. ಅವರಲ್ಲಿ ಅನನ್ಯಭಕ್ತಿಯೇ ಈ ಸಿದ್ಧಾಂತದ ತಿರುಳು, ನಾಮಸೇವೆ, ಸ್ವರೂಪ ಸೇವೆಗಳೆಂಬ ಪ್ರಭೇದಗಳಿವೆ ತನುಜ ವಿತ್ತಜ ಮಾನಸ ಎಂಬ ಪ್ರಭೇದಗಳಿಂದ ಭಕ್ತನು ದೇವನಲ್ಲಿ ಮೊರೆಯಿಡುತ್ತಾನೆ. ಕರ್ಮಕಾಂಡಕ್ಕೆ ಇವರು ವಿಶೇಷ ಮಹತ್ತ್ವವನ್ನಿತ್ತಿದ್ದಾರೆ.

ಯಮುನಾ ನದಿಯಿಂದಲೇ ಈ ದೇವನಿಗೆ ಅಭಿಷೇಕಕ್ಕಾಗಿ ಜಲವನ್ನು ತರುವ ಸಂಪ್ರದಾಯವಿದೆ. ಉತ್ಸವ ವಿಗ್ರಹವನ್ನು ಮದನ ಮೋಹನಜಿ ಎಂದು ಕರೆಯುತ್ತಾರೆ. ಪೂಜಾಕಾಲದಲ್ಲಿ ಸೂರದಾಸ, ಕೃಷ್ಣದಾಸ, ನಂದದಾಸ ಮೊದಲಾದವರಿಂದ ರಚಿತವಾದ ಭಕ್ತಿಗೀತೆಗಳನ್ನು ರಾಗಬದ್ಧವಾಗಿ ಗಾಯನ ಮಾಡುತ್ತಾರೆ.

ದೇವಮಂದಿರದ ಪ್ರಧಾನಾಧಿಕಾರಿಗಳನ್ನು ತಿಲಕಾಯುತನರೆಂದು ಕರೆಯುತ್ತಾರೆ, ಇವರು ವಲ್ಲಭಾಚಾರ್ಯರ ಪೂರ್ವಾಶ್ರಮ ಸಂತಾನರಾಗಿರುತ್ತಾರೆ, ಗೋಸ್ವಾಮಿಜಿ ಎಂದು ಗೌರವ ಸೂಚಕಪದವೂ ಬಳಕೆಯಲ್ಲಿದೆ. ದೇವಾಲಯದ ಕಾರ್ಯನಿರ್ವಹಣೆಗಾಗಿ ರಾಜಸ್ಥಾನ ಸರಕಾರದವರು ವಿಶ್ವಸ್ಥ ಸಮಿತಿಯನ್ನು ರಚಿಸಿದ್ದಾರೆ, ಅಧ್ಯಕ್ಷರು ಮಾತ್ರ ತಿಲಕಾಯುತನರೇ ಆಗಿರುತ್ತಾರೆ. ಸರಕಾರದವತಿಯಿಂದ ಐ. ಎ. ಎಸ್ ಅಧಿಕಾರಿಗಳೊಬ್ಬರು ಇರುತ್ತಾರೆ.

ನಾಥದ್ವಾರ ಇಂದು ಸುಮಾರು ಮೂವತ್ತು ಸಾವಿರ ಜನವಸತಿಯಿಂದ ಕೂಡಿರುವುದಾಗಿದೆ, ಇಲ್ಲಿ ನಡೆಯುವ ಹೋಳಿಹಬ್ಬ, ಕೃಷ್ಣಜನ್ಮಾಷ್ಟಮಿ, ಅನ್ನಕೂಟ, ಶ್ರಾವಣಮಾಸದ ಉತ್ಸವಗಳು, ವರ್ಷಾರಂಭದ ಉತ್ಸವ, ದೀಪಾವಳಿ ಮೊದಲಾದ ಸಂದರ್ಭಗಳಲ್ಲಿ ಲಕ್ಷಾಂತರ ಸಂಖ್ಯೆಯಲ್ಲಿ ಭಕ್ತರು ಬಂದು ಸೇರುತ್ತಾರೆ, ತಕ್ಕಮಟ್ಟಿಗೆ ಯಾತ್ರಾರ್ಥಿಗಳಿಗೆ ಬಿಡಾರದ ವ್ಯವಸ್ಥೆಗಳನ್ನು ಮಾಡಿದ್ದಾರೆ, ದೇವಸ್ಥಾನಕ್ಕೆ ಸೇರಿದ ಗೋಶಾಲೆ ತುಂಬ ದೊಡ್ಡದು, ಗಣನೀಯ ಸಂಖ್ಯೆಯಲ್ಲಿ ಗೋವುಗಳನ್ನು ನಾವು ಇಲ್ಲಿ ಕಾಣಬಹುದು.

ನಾಥದ್ವಾರವು ಚಿತ್ರಕಲೆಯಲ್ಲಿ ತನ್ನದೇ ಆ ಸ್ಥಾನವನ್ನುಳಿಸಿಕೊಂಡು ಬಂದಿದೆ. ಶ್ರೀಕೃಷ್ಣ ನಾನಾವಿಧ ರೂಪಗಳನ್ನು ಬಹುಚಿತ್ತಾಗಿ ಚಿ ಸಿದ್ದಾರೆ. ವಿಶೇಷವಾಗಿ ರಾಸಕ್ರೀಡಾಚಿತ್ರಗ ದೇಶ ವಿದೇಶಗಳಲ್ಲಿಯೂ ಬೇಡಿಕೆಯ ಹೊಂದಿವೆ. ನರೋತ್ತಮನಾರಾಯಣ, ಭಗ ಲಾಲ, ಮೊದಲಾದವರ ಚಿತ್ರಗಳು ಪ್ರಖ ಯನ್ನುಗಳಿಸಿವೆ. ಚಿತ್ರಕಲೆಯಂತೆ ಬೆಳ್ಳಿ, ಬಂಗಾ ಕುಸುರಿನ ಕೆತ್ತನೆಯ ಕಾರ್ಯದಲ್ಲಿಯೂ ಇಲ್ಲಿ ಕಾರ್ಮಿಕರು ಹೆಸರುವಾಸಿಗಳಾಗಿದ್ದಾರೆ. ಸಂಗಿ ದಲ್ಲಿಯೂ ನಾಥದ್ವಾರ ಹಿಂದೆ ಬಿದ್ದಿಲ್ಲ. ಪ ಷೋತ್ತಮದಾಸರ ಕಾರ್ಯಕ್ರಮವು ಆಗ ಬಾನುಲಿಯಿಂದ ಕೇಳಬಹುದಾಗಿದೆ. ಬಟ್ಟೆಗ ನಾನಾತರಹದ ಬಣ್ಣ ಹಾಕುವುದು ಹಾ ಸಿಹಿತಿಂಡಿಗಳನ್ನು ಮಾಡುವುದರಲ್ಲಿ ನಾಥದ್ವಾ ಜನರು ಬಹುಖ್ಯಾತರಾಗಿದ್ದಾರೆ. ಇಲ್ಲಿಯ ಗ ಬಿನ ನೀರು ಹಾಗೂ ಅತ್ತರುಗಳು ಜಗದ್ವಿಖ ಯನ್ನುಗಳಿಸಿದೆ.

ವಲ್ಲಭ ಸಂಪ್ರದಾಯವಾದಿಗಳಿಗೆ ನಾಥ ಕೈಲಾಸಪುರ, ಚಾರಭುಜ, ಸೇವಂತ್ರಿ, ಯಾನಾಥ ಇವು ಪ್ರಮುಖ ಯಾತ್ರಾಸ್ಥಳ ಗಿವೆ. ನಾಥದ್ವಾರಕ್ಕೆ ಹೋಗಲು ಅಹ ಬಾದ್ ದಿಲ್ಲಿಯ ಮಾರ್ಗ ಮೇವಾಡದ ಜಂ ನಿಂದ ಇನ್ನೊಂದು ಮಾರ್ಗವು ಅಜ ಖಾಂಡವಾ ಮಾರ್ಗವಾಗಿ ಚಿತ್ತೋ ಹೋಗಬಹುದಾಗಿದೆ. ಸ್ಟೇಷನನಿಂದ ಹನ ಕಿಲೋಮೀಟರ್ ದೂರದಲ್ಲಿ ಈ ಕ್ಷೇತ್ರವಿದೆ. ಸೌಕರ್ಯವು ಸಾಕಷ್ಟು ಪ್ರಮಾಣದಲ್ಲಿದೆ. ಪುರದಿಂದ ಈ ಕ್ಷೇತ್ರವು ನಲ್ವತ್ತೆಂಟು ಕಿ. ದೂರದಲ್ಲಿದೆ.

ವರ್ಷಋತುವಿನಲ್ಲಿ ಈ ಕ್ಷೇತ್ರದ ಮಾಡುವುದರಿಂದ ಪ್ರವಾಸಿಯ ಮನಸ್ಸಿಗೆ ಲಿನ ಪರಿಸರದಿಂದಾಗಿ ಹೊಸ ಉತ್ಸಾಹವು ವಂತಾಗುತ್ತದೆ.

ಶ್ರೀ ಕೃಷ್ಣನ ಜೀವನದಂತೆ ಆತನ ವ ವೆನಿಸಿದ ನಾಥದ್ವಾರವಾದರೂ ಕೂಡ ಮಹತ್ತ್ವಗಳಿಂದ ಕೂಡಿದ ಕ್ಷೇತ್ರವೆನಿಸುತ



(16ನೇ ಪುಟದಿಂದ)

ರಾತೆ ದೇವರನ್ನು ಸ್ಮರಿಸಿ ತುಂಬಿ ಹರಿಯುತ್ತಿದ್ದ ಹೊಳೆಯನ್ನು ದಾಟಿ ಬಂದೆ” ಎಂದು ಹೇಳಿದಳು. ಇವಳ ಮಾತುಗಳಿಂದಾಗಿ ಗುರುವಿಗೆ ಸ್ವಲ್ಪ ಆಶ್ಚರ್ಯ ಆಯಿತು. ಆಕೆ ಸುಳ್ಳು ಹೇಳುತ್ತಿರಬಹುದೆಂದೇ ಅವರು ಭಾವಿಸಿದರು. ಅವಳ ಮಾತನ್ನು ಪರೀಕ್ಷಿಸುವ ಸಲುವಾಗಿ ಅವಳು ಮರಳಿ ತನ್ನ ಹಳ್ಳಿಗೆ ಅದೇ ಹೊಳೆಯನ್ನು ದಾಟಿ ಹೋಗುವುದನ್ನು ನೋಡಬೇಕೆಂದು ಹೊಳೆ ಹತ್ತಿರ ಬಂದು ಮರೆಯಲ್ಲಿ ಕಾದು ಕುಳಿತರು. ಅವಳು ಯಥಾ ಪ್ರಕಾರ ಮೊಸರಿನ ಗಡಿಗೆಯನ್ನು ತಲೆ ಮೇಲಿಟ್ಟು ಕೈಜೋಡಿಸಿ ದೇವರನ್ನು ಸ್ಮರಿಸುತ್ತ ತುಂಬಿ ಹರಿಯುತ್ತಿದ್ದ ಆ ಹೊಳೆಯನ್ನು ಸರಾಗವಾಗಿ ದಾಟಿ ಹೊರಟು ಹೋದಳು. ಇದನ್ನು ಕಣ್ಣಾರೆ ಕಂಡ ಗುರು ಬೆರಗಾಗಿ ಹೋದರು. ಆ ಕ್ಷಣದಿಂದ ಆ ಹೆಂಗಸಿನ ಭಕ್ತಿಗೆ ಮೆಚ್ಚಿ ಅವಳನ್ನು ಗುರುವೆಂದೇ ಭಾವಿಸಿದರು”. ಹೀಗೆ ರಾಮಕೃಷ್ಣರು ಗುರು ಶಿಷ್ಯರಲ್ಲಿ ಆಗಲಿ ಯಾವುದರಲ್ಲಿಯೇ ಆಗಲಿ ಯಾವ ತಾರತಮ್ಯವೂ ಇಲ್ಲದೇ ದೇವರನ್ನು ಕೊಂಡಾಡಬೇಕೆಂದೂ ಹೇಳುತ್ತಾರೆ.

ಇಂಥ ಪರಿಶುದ್ಧಾತ್ಮನನ್ನು ಕಂಡು ಕೃತಾರ್ಥರಾಗಬೇಕಾದರೆ, ಮುಕ್ತಿ ಪಡೆಯಬೇಕಾದರೆ ಸದಾ ಸಜ್ಜನರ ಸಹವಾಸ ಮಾಡಬೇಕು. ಒಳ್ಳೆಯ ವಿಚಾರ ಮಾಡಬೇಕು. ಮನದಲ್ಲಿ ಸದ್ಭಾವನೆ ತುಂಬಿಕೊಳ್ಳಬೇಕು. ಇಂಥ ವಾತಾವರಣವನ್ನು ಸೃಷ್ಟಿಸಿಕೊಂಡು ದೇವರನ್ನು ಸ್ಮರಿಸಬೇಕು. ಈ ರೀತಿ ಮೊದಲು ತಮ್ಮ ಮನಸ್ಸನ್ನು ಹದಮಾಡಿಕೊಂಡಾಗ ಮಾತ್ರ ಪರಮಾತ್ಮನನ್ನು ಧ್ಯಾನಿಸಲು ಆ ನಿರಾಕಾರ ಮೂರ್ತಿಯನ್ನು ಸಾಕಾರಗೊಳಿಸಿಕೊಳ್ಳಲು ಸಾಧ್ಯವಾಗುತ್ತದೆ ಎಂದು ಹೇಳುತ್ತ ಇದಕ್ಕೊಂದು ಕಥೆ ಹೇಳುತ್ತಾರೆ.

ಒಬ್ಬಳು ಮೀನು ಮಾರುವ ಹೆಂಗಸು ಬುಟ್ಟಿ ತುಂಬ ಮೀನು ಹೊತ್ತು ಸಂತೆಗೆ ಹೋಗಿ ಮೀನುಗಳನ್ನು ಮಾರಿ ಖಾಲಿ ಬುಟ್ಟಿಯೊಂದಿಗೆ ಸಂಜೆ ತನ್ನ ಊರಿಗೆ ಮರಳಿ ನಡೆಯುತ್ತಾಳೆ. ಹೀಗೆ ನಡೆದಿರಲು ಅರ್ಧದಾರಿಗೆ ಬರುವಷ್ಟರಲ್ಲಿ ಕತ್ತಲಾಗುತ್ತದ. ಆಗ ಅವಳಿಗೆ ಭಯವಾಗಿ ಚಿಂತಿಸುತ್ತ ನೋಡುತ್ತಾಳೆ. ಪಕ್ಕದಲ್ಲಿಯೇ ಒಂದು ತೋಟ ಕಾಣಿಸುತ್ತದೆ. ಆ ತೋಟದ ಮನೆಯಲ್ಲಿ ಬೆಳಕು ಕಾಣುತ್ತದೆ. ಅಲ್ಲಿ ಯಾರಾದರೂ ಇರಬಹುದು. ಇಂದು ಅಲ್ಲಿ ಉಳಿದಿದ್ದು ಮರುದಿನ ಹೋಗೋಣವೆಂದು ತೀರ್ಮಾನಿಸಿ ತೋಟಕ್ಕೆ ಹೋಗಿ ಅದರ ಯಜಮಾನನಿಗೆ ಕೇಳಿಕೊಳ್ಳುತ್ತಾಳೆ. ಆತ ಒಪ್ಪಿದ ಮೇಲೆ ಆ ರಾತ್ರಿ ಅಲ್ಲಿ ಮಲಗುತ್ತಾಳೆ. ಎಷ್ಟು ಹೊತ್ತಾದರೂ ಅವಳಿಗೆ ನಿದ್ರೆ ಹತ್ತುವುದಿಲ್ಲ. ಅದು ಮಲ್ಲಿಗೆಯ ತೋಟ–ಪರಿಮಳಭರಿತ ಸುವಾಸನೆ ಅತಿಯಾಗಿ ಅವಳ ಮೂಗಿಗೆ ಬಡಿಯುತ್ತಿದ್ದರಿಂದ, ಅದು ಅವಳಿಗೆ ಅಭ್ಯಾಸವಿಲ್ಲದ್ದರಿಂದ ನಿದ್ರೆ ಬರದೇ ಪೇಚಾಡುತ್ತಾಳೆ. ಕೊನೆಗೆ ಅವಳಿಗೆ ಒಂದು ಉಪಾಯ ಹೊಳೆಯುತ್ತದೆ. ಕೂಡಲೇ ಎದ್ದು ಮೀನು ತುಂಬಿ ಹೊಲಸಾಗಿದ್ದ ಖಾಲಿ ಬುಟ್ಟಿಗೆ ಒಂದು ತಂಬಿಗೆ ನೀರನ್ನು ಚೆನ್ನಾಗಿ ಚಿಮುಕಿಸಿ ಅದನ್ನು ತನ್ನ ತಲೆಯ ಹತ್ತಿರ ಇಟ್ಟುಕೊಂಡು ಮಲಗುತ್ತಾಳೆ. ಆಗ ಅವಳಿಗೆ ಹಾಯಾಗಿ ನಿದ್ರೆ ಬರುತ್ತದೆ.

‘ಹೀಗೆ ಅವರವರ ಅಭ್ಯಾಸಕ್ಕೆ ತಕ್ಕಂತೆ ಅವರವರ ಬದುಕು ಹೊಂದಿಕೊಂಡಿರುತ್ತದೆ. ಅದರಂತೆ ನಾವು ದೇವರನ್ನು ಕಾಣಬೇಕಾದರೆ ಯಾವ ರೀತಿಯಲ್ಲಿ ನಾವು ನಮ್ಮ ಮನಸ್ಸನ್ನು ಹದಮಾಡಿಕೊಳ್ಳಬೇಕು ಎಂಥ ವಾತಾವರಣವನ್ನು ಸೃಷ್ಟಿಸಿಕೊಳ್ಳಬೇಕೆಂಬುದನ್ನು ನೀವೇ ಊಹಿಸಿಕೊಳ್ಳಿ’ ಎಂದು ರಾಮಕೃಷ್ಣ ಪರಮಹಂಸರು ನುಡಿದು ಜನರ ದೃಷ್ಟಿಕೋನವನ್ನು ಆಧ್ಯಾತ್ಮಿಕ ಕ್ಷೇತ್ರದತ್ತ ಸೆಳೆದಿದ್ದಾರೆ.

ಈ ರೀತಿಯಾಗಿ ಪರಮಾತ್ಮನಲ್ಲಿ ಅನನ್ಯ ಭಕ್ತಿಯನ್ನಿಟ್ಟು ತಪಸ್ಸು ಮಾಡಿ ದೇವರನ್ನು ಕಂಡು ಕೃತಾರ್ಥರಾಗಿದ್ದಾರೆ. ಇವರು ನಿಶ್ಚಲ ಭಕ್ತಿಯಿಂದ ಧ್ಯಾನಕ್ಕೆ ಕುಳಿತರೆಂದರೆ ಶಿಲಾವಿಗ್ರಹದಂತೆ ಆಗುತ್ತಿದ್ದರು. ಇವರ ಅಚಲ ದೇಹವನ್ನು ನೋಡಿ ಪಕ್ಷಿಗಳು ನಿರ್ಭಯವಾಗಿ ಇವರ ದೇಹದ ಮೇಲೆ ಕೂಡುತ್ತಿದ್ದವು. ಆದ್ದರಿಂದಲೇ ಇಂಥ ಮಹಾಮಹಿಮರ ಭಕ್ತಿ ಲೋಕ ಖ್ಯಾತವಾಯಿತು.

ರಾಮಕೃಷ್ಣರು ಸಣ್ಣವರಿದ್ದಾಗಲೂ ಅಷ್ಟೇ; ತಮಗೆ ಅನ್ನಿಸಿದ್ದನ್ನು, ತಾವು ಕಂಡದ್ದನ್ನು ಯಾರಿಗೂ ಯಾವುದಕ್ಕೂ ಅಂಜದೆ ನೇರವಾಗಿ ಹೇಳಿಬಿಡುತ್ತಿದ್ದರು. ಅಂಜುವ ಎದೆ ಇವರದ್ದಲ್ಲ. ಎಷ್ಟೋ ಸಾರಿ ರಾತ್ರಿಯ ವೇಳೆಯಲ್ಲಿ ಸ್ಮಶಾನಕ್ಕೆ ಹೋಗಿ ಪ್ರಶಾಂತವಾಗಿ ಕುಳಿತು ಧ್ಯಾನ ಮಾಡುತ್ತಿದ್ದರು.

ಇಂಥ ಮಹಾಮಹಿಮರನ್ನು ಕಾಣಲು ಅವರ ಸತಿ ಶಾರದಾದೇವಿ ತಮ್ಮ 18 ನೆಯ ವಯಸ್ಸಿನಲ್ಲಿ ಒಮ್ಮೆ ದಕ್ಷಿಣೇಶ್ವರಕ್ಕೆ ದಯಮಾಡಿಸಿದರು. ಆಗ ರಾಮಕೃಷ್ಣರು ಸಂತಸದಿಂದ ಸತಿಯನ್ನು ಸ್ವಾಗತಿಸಿ, ಆದರದಿಂದ ಗೌರವಿಸಿದರು. ಶಾಸ್ತ್ರೀಯವಾಗಿ ಶಾರದಾದೇವಿಯನ್ನು ಇವರು ಮದುವೆ ಆಗಿದ್ದರು. “ನನಗೆ ಎಲ್ಲಾ ಸ್ತ್ರೀಯರೂ ಜಗನ್ಮಾತೆಯ ಪ್ರತಿಬಿಂಬದಂತೆ ಕಾಣುವರು. ನಾನು ನಿನ್ನಲ್ಲಿಯೂ ಅದನ್ನೇ ನೋಡುತ್ತೇನೆ. ಆದರೆ ನೀನು ಇಂದ್ರಿಯ ಪ್ರಪಂಚದಲ್ಲಿ ಇರಲು ಇಚ್ಛೆಪಟ್ಟರೆ ಅದಕ್ಕೂ ನಾನು ಸಿದ್ಧನಾಗಿರುವೆ. ನಿನಗೆ ಯಾವುದು ಬೇಕು ಕೇಳು” ಎಂದರು. ಆದರೆ

ಶಾರದಾದೇವಿಯವರು ಪರಮಹಂ
ಯಾಗಿದ್ದರಿಂದ ‘ನಾನೂ ತಮ್ಮಂ
ಬಯಸುತ್ತೇನೆ’ ಎಂದರು. ಇದನ್
ಕೃಷ್ಣರಿಗೆ ಅತ್ಯಾನಂದವಾಯಿತು
ಗಳಾಗಿಯೂ ಅಜನ್ಮ ಬ್ರಹ
ಇಬ್ಬರೂ ಜಗನ್ಮಾತೆಯ ಸೇವೆಗೆ
ನಿಂತರು.

ಸಾಧಾರಣ ಜನರು ದೇಹ
ಮೀರಿ ಹೋದರೆ ಅಲ್ಲಿ ಆನಂ
ಎಲ್ಲಿರುತ್ತದೆ ಎಂದು ಶಂಕಿಸಬಹ
ನಿಜವಾದ ಆನಂದ, ಶುದ್ಧ ಪ್ರೇಮ
ವನ್ನು ಮೀರಿ ಹೋದಾಗ ಮ
ಯಾರು ದೇಹಬುದ್ಧಿಯಲ್ಲಿ ನರ
ಅಲ್ಲಿ ಕಾಮಮಿಶ್ರಪ್ರೇಮ ಮಾ
ಎಂದು ಲೋಕನೀತಿಯನು,
ಪ್ರೇಮಕ್ಕೆ ತಮ್ಮನ್ನೇ ತಾವು ಆ
ನಿದರ್ಶಿಗಳಾಗಿ ನಿಂತಿದ್ದಾರೆ. ಈ
ನಿಸ್ವಾರ್ಥ ಪ್ರೇಮದಿಂದ ದೇವರ
ಬೇಕು ಎಂದು ಒತ್ತಿ ಹೇಳಿದ್ದಾರೆ. ಒ
“ನಿಮ್ಮ ನಿಮ್ಮ ಮನವ ಸ
ಎಂದು ಹೇಳಿರುವಂತೆ ಮೊ
ತನು–ಮನವ ಸಂತೈಸಿಕೊಂಡು
ಕಾಣಲು ತೊಡಗಬೇಕು. ಆಗ
ನಿರಾಕಾರ ಮೂರ್ತಿ ಗೋ
ನಿಮ್ಮನ್ನು ಕೃತಾರ್ಥರನ್ನಾಗಿಸುತ್ತಾ
ಮೂಲಕ ನಾಸ್ತಿಕರಿಗೆ ನಯವ
ಏಟನ್ನು ಕೊಟ್ಟು ಅದ್ವೈತ ಸಿ
ಸಾರಿದ್ದಾರೆ. ಅಧ್ಯಾತ್ಮದ ಪುಟ
ತೆರೆದಿಟ್ಟಿದ್ದಾರೆ.

ತೋತಾಪುರಿ ಎಂಬ ಸನ್ಯಾಸಿಯಿ
ದೀಕ್ಷೆಯನ್ನು ಪಡೆದ ರಾಮಕೃಷ್ಣರ
ಗಳ ರೂಪದಲ್ಲಿ, ದೃಷ್ಟಾಂತಗಳ ರೀ
ಅನುಭಾವದ ಸಂದೇಶವನ್ನೂ, ಉ
ಲೋಕೋದ್ಧಾರಕ್ಕಾಗಿ ಬಳುವಳಿ
ದ್ದಾರೆ. ಹೀಗೆ ವಿಶಾಲವಾದ ಧಾ
ವನ್ನೇ ಲೋಕದಲ್ಲಿ ಸೃಷ್ಟಿಸಿ ಹೋ

ಇಂಥ ಮಹಾಮಹಿಮರ, ಅವ
ಪವಿತ್ರವಾದ ಆತ್ಮಪಕ್ಷಿ 1886 ಆಗ
ಇಹಲೋಕವನ್ನು ತ್ಯಜಿಸಿ ಪರಮಾ
ವಾಯಿತು. ಇಂಥ ದೈವೀ ಪುರುಷರ
ಆಚಾರ, ವಿಚಾರಗಳು ಭರತ
ಅಲ್ಲದೇ ಪರದೇಶಗಳಲ್ಲಿಯೂ ಕೀತಿ
ಮೆರೆದಿವೆ–ಮೆರೆಯುತ್ತಿವೆ. ಅ
ಉಳಿಯುತ್ತವೆ.



(ಪುಟದಿಂದ)

,ಉತ್ತಮರಾದ ಬ್ರಹ್ಮಾದಿ ದೇವತೆ ಲೂ ಉತ್ತಮನಾದ ಕಮಲಾಕ್ಷ ಸ್ವಾಮಿಯು ಸರ್ವೋತ್ಕೃಷ್ಟ ನೆ. ವಿಸ್ತಾರವಾದ ವೆಂಕಟಾಚಲದ ಪ್ರದೇಶವನ್ನು ನಿವಾಸಸ್ಥಾನ ಮಾಡಿಕೊಂಡು, ಶ್ರೇಷ್ಠನಾಗಿಯೂ ಥ ವೆಂಕಟೇಶ್ವರನ್ನು ಭಜಿಸುತ್ತೇನೆ.

ವೇಂಕಟಪತೇ ದೀನಗತೇ
ಾಕೃತೇ ಕ್ಷಿತೌ ।
ಸ್ತಮಸ್ತಮತ್ಸ್ಯಾರ್ತಿ
ಮರ್ದನ ಕಿಮುಸ್ತಿ ತೇ ।
ಸ್ತ ಸುಜನಾಧಾರಂ
ಷದೂರ ಗುಣಾಕರಂ ।
ವೇಂಕಟಾಚಲ ವಾಸಂ
ನಿವಾಸಂ ಭಜೇsನಿಶಂ ॥

ಮ್ಯಾದಿ ಸಮಸ್ತ ಸಂಕಟ ಪರಿಹಾರಕ ಸುಂದರಾಕಾರನಾದ, ವೆಂಕಟಾಚಲ ೇ, ನಿನಗೆ ಸಮನಾದವರು ಭೂಮಿ ಯಾರಿದ್ದಾರೆ! ಸಕಲ ಸಜ್ಜನರಿಗೂ ುನಾಗಿರುವ ದೋಷರಹಿತನಾಗಿರುವ ತ್ತ ಗುಣಪೂರ್ಣನಾದ ಶ್ರೀ ವೆಂಕಟಾಚಲ ನೇ ನಿನ್ನನ್ನು ಸದಾ ಭಜಿಸುತ್ತೇನೆ.

ವಂದ ತೀರ್ಥವರದೇ
ನವಾರಣ್ಯ ಪಾವಕೇ ।
ಜ್ಞಾನ ದಾಯಿನಿ ಸರ್ವೇಶೇ
ನಿವಾಸೇ ಸ್ತುಮೋ ಮನಃ ॥

ಮದಾನಂದತೀರ್ಥವರದನಾಗಿಯೂ, ರಾಕ್ಷಸಜನ ಸಂಹಾರಕನಾಗಿಯೂ, ರಿಗೆ ಜ್ಞಾನ ಪ್ರದನಾಗಿಯೂ ಇರುವ ನಿವಾಸನಲ್ಲಿ ನನ್ನ ಮನಸ್ಸು ನಾಗಲೂ ನೆಲೆಗೊಳ್ಳಲಿ. ತಿರುಪತಿ ದಿಂದ ಹೊರಡುವಾಗ ಭಗವಂತನನ್ನು ೀತಿ ಪ್ರಾರ್ಥಿಸಿದಲ್ಲಿ ಭಕ್ತರಿಗೆ ಭಕ್ತ ಲ ಶ್ರೀನಿವಾಸನ ಸಂಪೂರ್ಣ ಅನುಗ್ರಹ ುವಲ್ಲಿ ಸಂದೇಹವೇ ಇಲ್ಲ. ವಾದಿ ಯತಿಪುಂಗವರ 'ತೀರ್ಥ-ಪ್ರಬಂಧ' ಗ್ರಂಥದಲ್ಲಿರುವ ಈ ಸ್ತೋತ್ರರತ್ನ ಪ್ರತಿದಿನವೂ ಪಠಿಸುವುದರಿಂದ ಪತಿ ಯಾತ್ರೆ ಮಾಡಿದ ಫಲವೇ ಪ್ರಾಪ್ತಿ ಾಗುವುದು.

★

(10 ನೇ ಪುಟದಿಂದ)

ಅಖಿಲಾಂಡ ಕೋಟಿ ಬ್ರಹ್ಮಾಂಡನಾಯಕ ನಾಗಿ, ಸರ್ವಾಧಾರಭೂತನಾಗಿ, ಸರ್ವ ವ್ಯಾಪಿ ಯಾಗಿ ಸರ್ವ ಸ್ವಾಮಿಯಾಗಿರುವ ಶ್ರೀಕೃಷ್ಣ ಪರ ಮಾತ್ಮನಲ್ಲಿ ಈ ಜಗತ್ತೆಲ್ಲವೂ ನೆಲಸಿರುವುದು. ಅಂತಹ ಸ್ವಾಮಿಯು ದುಷ್ಟನಿಗ್ರಹ, ಶಿಷ್ಟಪರಿಪಾ ಲಕ್ಕಾಗಿ, ಆಗಾಗ ಭೂಮಂಡಲದಲ್ಲಿ ಮತ್ಸ್ಯ, ಕೂರ್ಮ, ವರಾಹ, ವಾಮನ, ನಾರಸಿಂಹ, ಪರಶುರಾಮ, ಶ್ರೀರಾಮ, ಬಲರಾಮ ಅವತಾರ ಗಳನ್ನೆತ್ತಿದಂತೆ, ಪೂರ್ಣಾವತಾರವಾಗಿ ಪ್ರಕಾಶಿ ಸುತ್ತಿರುವ ಎಲೈ! ಶ್ರೀಕೃಷ್ಣನೇ, ನನ್ನ ವಿಶಿಷ್ಟವೂ ನಿನ್ನಲ್ಲಿ ನೆಲೆಸಿದೆ. ಅನಾಥನಾಗಿ, ಸಂಸಾರ ಸಾಗರದಲ್ಲಿ ಸಿಲುಕಿ ಪರಿತಪಿಸುತ್ತಲಿರುವ ನನ್ನನ್ನು ರಕ್ಷಿಸು' ಎಂದು ಆಳ್ವಾರರು ಅನನ್ಯ ಭಕ್ತಿಯಿಂದ ಪ್ರಾರ್ಥಿಸಿದ್ದಾರೆ, ಹೀಗೆ ಕುಲಶೇಖರರು ಎಂಟು ವಿಭಕ್ತಿಗಳಿಂದ ಶ್ರೀಕೃಷ್ಣ ಪರಮಾತ್ಮನನ್ನು ಸಂಬೋಧಿಸಿ, ಪ್ರಾರ್ಥಿಸಿ, ತಮ್ಮ ದಾಸತ್ವವನ್ನು ವ್ಯಕ್ತಪಡಿಸಿದ್ದಾರೆ. ಸ್ವಾಮಿಯ ಅಭಯವನ್ನು ಬೇಡಿ, ಲೋಕಕ್ಕೆ ಮಾರ್ಗದರ್ಶಿಗಳಾಗಿದ್ದಾರೆ.

ಈ ಸ್ತೋತ್ರದ ಕೊನೆಯ ಶ್ಲೋಕ ಹೀಗಿದೆ :
ಕ್ಷೀರಸಾಗರ ತರಂಗಶೀಕರಾ
ಸಾರ ತಾರಕಿತಚಾರುಮೂರ್ತಯೇ
ಭೋಗಿಭೋಗಶಯನೀಯಶಾಯಿನೇ
ಮಾಧವಾಯ ಮಧುವಿದ್ವಿಷೇ ನಮಃ ॥

ಕ್ಷೀರಸಾಗರದ ಅಲೆಗಳು ನಕ್ಷತ್ರದಂತಿವೆ. ಅವು ಮನೋಹರವಾಗಿವೆ. ಅಲೆಗಳ ತುಂತುರು ಗಳಿಂದ ವ್ಯಾಪ್ತವಾದ ಶರೀರವುಳ್ಳವನಾಗಿ ಪರಮಾತ್ಮನು ಆದಿಶೇಷ ಪರ್ಯಂಕದಲ್ಲಿ ಯೋಗ ನಿದ್ರಾರೂಢನಾಗಿದ್ದಾನೆ. ಮಧುವೆಂಬ ರಾಕ್ಷಸ ನನ್ನು ಸಂಹರಿಸಿದ ಲಕ್ಷ್ಮೀನಾರಾಯಣನಿಗೆ ನಾನು ಸದಾ ನಮಸ್ಕರಿಸುತ್ತೇನೆ – ಹೀಗೆ ಕುಲ ಶೇಖರ ಆಳ್ವಾರರು ಶ್ರೀಮನ್ನಾರಾಯಣನಲ್ಲಿ ಶರಣಾಗತರಾಗಿ, ಮುಕುಂದಮಾಲಾ ಸ್ತೋತ್ರ ರಚನೆಯಿಂದ ತಮ್ಮ ಅನನ್ಯ ಭಕ್ತಿಯ ಅನುಭವ ವನ್ನು ವಿವರಿಸಿ, ಮುಕ್ತಿಪಡೆದರು. ಜಗತ್ತಿನ ಜನರು ತಮ್ಮಂತೆ, ಪರಮಾತ್ಮನನ್ನು ಈ ಸ್ತೋತ್ರದ ಮೂಲಕ ಪ್ರಾರ್ಥಿಸಿ, ಉಜ್ಜೀವಿಸಲಿ ಎಂದು ಪ್ರಾರ್ಥಿಸಿದ್ದಾರೆ. ಸರಳವೂ, ಸುಂದರವೂ ಸುಲಭವೂ ಆಗಿರುವ ಮುಕುಂದಮಾಲಾ ಸ್ತೋತ್ರ ವನ್ನು ಸರ್ವರೂ ಪಠಿಸಿ, ಪ್ರಾರ್ಥಿಸಿ, ಪರಮಾ ತ್ಮನ ಕೃಪೆಗೆ ಪಾತ್ರರಾಗಬೇಕು.




# ಶ್ರೀ ಗೋವಿಂದರಾಜಸ್ವಾಮಿ ದೇವಾಲಯ, ತಿರುಪತಿ.

## ದರ್ಶನ ಹಾಗೂ ಸೇವಾ ವಿವರಗಳು

| | ರಿಂದ | ವರೆಗೆ |
|---|---|---|
| ಸುಪ್ರಭಾತ | ಪ್ರಾ 5-00 | ಪ್ರಾ 5-30 |
| ವಿಶ್ವರೂಪ ಸರ್ವದರ್ಶನ* | ಪ್ರಾ 5-30 | ಪ್ರಾ 7-00 |
| ತೋಮಾಲ ಸೇವೆ | ಪ್ರಾ 7-30 | ಪ್ರಾ 8-00 |
| (ಆರ್ಜಿತ ಪ್ರತಿವ್ಯಕ್ತಿಗೆ ರೂ 4-00) | | |
| ಅರ್ಚನ | ಪ್ರಾ 8-00 | ಪ್ರಾ 8-3 |
| (ಆರ್ಜಿತ ಪ್ರತಿವ್ಯಕ್ತಿಗೆ ರೂ 4-00) | | |
| ಸರ್ವದರ್ಶನ | ಪ್ರಾ 9-00 | ಮ 12-3 |
| | ಮ. 1-00 | ಸಂ 6-0 |
| | ರಾ 7-00 | ರಾ 8-4 |
| ಏಕಾಂತಸೇವೆ. | | ರಾ 9-00 |

* ಶುಕ್ರವಾರ, ಏಕಾದಶಿ, ಉತ್ತರಾನಕ್ಷತ್ರದ ದಿ ಮತ್ತಿತರ ಹಬ್ಬ ಹರಿದಿನಗಳಲ್ಲಿ ವಿಶ್ವರೂ ಸರ್ವದರ್ಶನವು ಪ್ರಾ 5-30 ರಿಂದ ಪ್ರಾ 6-30 ವರೆಗೆ ಮಾತ್ರ.

## ಆರ್ಜಿತ ಸೇವೆಗಳು

| | | |
|---|---|---|
| 1. | ಗರುಡವಾಹನ | 32- |
| 2. | ಚಂದ್ರಪ್ರಭ ವಾಹನ | 32- |
| 3. | ಗಜವಾಹನ | 32- |
| 4. | ಅಶ್ವವಾಹನ | 32- |
| 5. | ಸಿಂಹವಾಹನ | 32- |
| 6. | ಹಂಸವಾಹನ | 32- |
| 7. | ಚಿಕ್ಕಶೇಷವಾಹನ | 32- |
| 8. | ದೊಡ್ಡ ಶೇಷವಾಹನ | 62- |
| 9. | ಸೂರ್ಯಪ್ರಭವಾಹನ | 62- |

## ಪಡಿಪ್ರಸಾದಗಳು

| | | | |
|---|---|---|---|
| 1. | ದೋಸೆ | ಕಾಲುಸೋಲ | 35 |
| 2. | ದಧ್ಯೋದನ | " | 40 |
| 3. | ಪುಳಿಯೋಗರೆ | " | 50 |
| 4. | ಪೊಂಗಲು | " | 55 |
| 5. | ಸಕ್ಕರೆಪೊಂಗಲ್ | " | 55 |
| 6. | ಶಾಕರ ಭಾತ್ | " | 85 |
| 7. | ಕೇಸರೀ ಭಾತ್ | " | 90 |
| 8. | ಸೀರ | " | 155 |

ವಿವರಗ

ಪೇಷ್ಕಾ

ಶ್ರೀ ಗೋವಿಂದರಾಜಸ್ವಾಮಿ ದೇವಾ
ತಿರ


★

# ಶ್ರೀ ವೆಂಕಟೇಶ್ವರಸ್ವಾಮಿದೇವಾಲಯ, ತಿರುಮಲೆ

# ಉದಯಾಸ್ತಮಾನ ಸರ್ವ ಸೇವಾ ಯೋಜನೆ

ವರ್ಷಕ್ಕೊಂದು ದಿನ ಶ್ರೀ ವೆಂಕಟೇಶ್ವರಸ್ವಾಮಿಯ ಎಲ್ಲ ಸೇವೆಗಳ ವೆಚ್ಚವನ್ನೂ ಭರಿಸುವ ದತ್ತಿಯನ್ನು ನೀ ಬಯಸುವ ಭಕ್ತರಿಗಾಗಿ ದೇವಸ್ಥಾನದಲ್ಲಿನ ಉದಯಾಸ್ತಮಾನ ಪರ್ಯಂತ ಎಲ್ಲ ಸೇವೆಗಳನ್ನೂ ಮಾಡಿಸಲು ಅವಕಾ ಕಲ್ಪಿಸಿಕೊಡುವ ಒಂದು ವಿಶೇಷ ಯೋಜನೆಯನ್ನು ರೂಪಿಸಲಾಗಿದೆ. ಈ ಸರ್ವಸೇವೆಯಲ್ಲಿ ಸುಪ್ರಭಾತ, ತೋಮಾಲ ಅರ್ಚನೆ, (ಮೂರು ಬಾರಿ), ನೈವೇದ್ಯ ಹಾಗೂ ಮತ್ತಿತರ ಸೇವೆಗಳು ಸೇರಿವೆ. ಈ ಯೋಜನೆಯ ಪರಿಧಿಯಲ್ಲಿ ಅರ್ಜಿ ಸೇವೆಗಳಾದ ಕಲ್ಯಾಣೋತ್ಸವ, ಊಂಜಲ್‌ಸೇವೆ, ಬ್ರಹ್ಮೋತ್ಸವ, ಕೋಯಿಲ್ ಆಳ್ವಾರ್ ತಿರುಮಂಜನ, ಸಹಸ್ರ ಕಲಶಾ ಷೇಕ, ತಿರುಪ್ಪಾವಡ, ವಾಹನಸೇವೆಗಳು ಮೊದಲಾದವು ಬರುವುದಿಲ್ಲ.

ಈ ಯೋಜನೆಯ ಹಲವು ವೈಶಿಷ್ಟ್ಯಗಳು ಹೀಗಿವೆ:

* ಶುಕ್ರವಾರಗಳ ಹೊರತು ಇತರೆ ಯಾವುದೇ ದಿನಗಳ ಸರ್ವಸೇವೆಯ ದತ್ತಿಯಾಗಿ ಕಾರ್ಯನಿರ್ವಹಣಾಧಿಕಾರಿ ತಿ.ತಿ. ದೆ ತಿರುಪತಿ ಇವರಿಗೆ 1 ಲಕ್ಷ ರೂಗಳ ಭಾರತದಲ್ಲಿನ ಯಾವುದೇ ಬ್ಯಾಂಕ್‌ನ ಡಿಮಾಂಡ್ ಡ್ರಾಫ್ಟನ್ನೇ ಕಳುಹಿಸಬೇಕು ಶುಕ್ರವಾರಗಳಲ್ಲಿನ ಸರ್ವಸೇವೆಗಾಗಿ ನಿಗದಿ ಆಗಿರುವ ದತ್ತಿಯ ಮೌಲ್ಯ ರೂ: 3 ಲಕ್ಷ. ಇದರಲ್ಲಿ ಶುಕ್ರವಾರ ಅಭಿಷೇಕವೂ ಸೇರುವುದು.

* ಗೊತ್ತಾದ ದಿನದಂದು ಎಲ್ಲ ಸೇವೆಗಳಿಗೂ ಆರು ಮಂದಿಗೆ ಪ್ರವೇಶ ನೀಡಲಾಗುವುದು. ಎಂದರೆ ಶುಕ್ರವಾರಗ ಹೊರತು ಸುಪ್ರಭಾತ, ತೋಮಾಲೆ, ಸಹಸ್ರನಾಮಾರ್ಚನೆ ಏಕಾಂತ ಸೇವೆಗಳು. ಆಯಾ ದಿನದಲ್ಲಿ ಇಲ್ಲಿನ ಯಾವುದೇ ಸೇವೆಯನ್ನು ಯಾವ ಕಾರಣಕ್ಕಾಗಿಯಾದರೂ ಮುಂದೂಡಲಾಗಿದ್ದಲ್ಲಿ ಅಂತಹ ಸೇವಾ ಪ್ರವೇಶವಿರದು.

* ದತ್ತಿ ನೀಡಿದವರ ಹೆಸರನ್ನು ದೇವಸ್ಥಾನದ ಒಳಗಡೆ ಎದ್ದು ಕಾಣುವಂತೆ ಬರೆದು ಪ್ರದರ್ಶಿಸಲಾಗುವುದು. ಆ ದಿನ ಆಸ್ಥಾನದಲ್ಲಿ ಅವರ ಹೆಸರು ಗೋತ್ರಗಳನ್ನು ಹೇಳಲಾಗುವುದು.

* ಆ ದಿನದ ಎಲ್ಲ ಅರ್ಜಿತಸೇವೆಗಳನ್ನು ದತ್ತಿ ನೀಡಿದವರು ಹಾಗೂ ಅವರ ಪೈಕಿಯವರು ವೀಕ್ಷಿಸಲು ಅನುಮತಿ ನೀಡಲಾ ಗುತ್ತದೆ.

* ದತ್ತಿ ನೀಡಿದವರಿಗೆ (1) ಶ್ರೀ ವೆಂಕಟೇಶ್ವರಸ್ವಾಮಿಯವರ ಕಲ್ಯಾಣೋತ್ಸವದಲ್ಲಿ ಅಂದು ಬಳಸಲಾದ ಒಂದು ಶೇಷವ
(2) 25 ಲಾಡು ಹಾಗೂ ವಡೆಗಳನ್ನು ಬಹೂಕರಿಸಲಾಗುವುದು.

* ವಸ್ತು, ವಿಷಯಗಳ ದರಗಳು ಅಸಹಜವಾಗಿ ಏರಿದಲ್ಲಿ ದತ್ತಿ ನೀಡಿದವರಿಗೆ ಹೆಚ್ಚಿನ ದತ್ತಿಯನ್ನು ನೀಡಲು ಅವಕ ನೀಡಲಾಗುವುದು (ಒಂದುಬಾರಿಗೆ 10% ದಂತೆ). ದತ್ತಿ ನೀಡಿದವರು ಈ ಹೆಚ್ಚಿನ ಮೊತ್ತವನ್ನು ನೀಡಲು ಮು ಬರದಿದ್ದಲ್ಲಿ ತಿ.ತಿ.ದೇ. ಬೇರೊಂದು ದತ್ತಿಯನ್ನು ಸ್ವೀಕರಿಸಲು ಸ್ವತಂತ್ರವಾಗಿರುತ್ತದೆ. ಆಗ ಸೇವೆಗಳನ್ನು ಇಬ್ಬ ಅಥವಾ ಹೆಚ್ಚಿನ ಗೃಹಸ್ಥರ ಹೆಸರಿನಲ್ಲಿ ನಡೆಸಲಾಗುವುದು. ದತ್ತಿ ನೀಡಿದವರಿಗೆ ಸೇವಾ ದಿನವನ್ನು ಮೂವತ್ತು ದಿನ ಮೊದಲೇ ಸಾಮಾನ್ಯವಾಗಿ ತಿಳಿಸಲಾಗುವುದು.

ಇತರ ವಿವರಗಳಿಗೆ ಹಾಗೂ ಸ್ಪಷ್ಟೀಕರಣ
ಬರೆಯಿರಿ:

**ಕಾರ್ಯನಿರ್ವಹಣಾಧಿಕಾರಿ**

ತಿ. ತಿ. ದೇ. ತಿರುಪತಿ.

ಸಂಚಿಕೆಯಿಂದ)

ರ್ ಪೂಜೆಯಲ್ಲಾದ ವಿಕಾಸವನ್ನು ಲಿಸಬಹುದು. ಪೂರ್ಣ ಘಟ ಮತ್ತು ಭದ್ರ ಮಂಡಲ—ಇವು ದುರ್ಗಾ ಪೂಜೆ ಕತ್ತರವಾದುವು.

ಸಸ್ಯಗಳನ್ನು ಹರಡಿದ ಮಣ್ಣಿನ ಚೌಕದ ರಿನಿಂದ ತುಂಬಿದ ಮಣ್ಣಿನ ಮಡಕೆ ಯನ್ನು ಇಡುತ್ತಾರೆ. ಮೊಸರನ್ನವನ್ನು ಲ್ಲಿ ಇಡುತ್ತಾರೆ. ಮಡಕೆಯ ಕಂಠ ಕೆಂಪು ದಾರವನ್ನು ಕಟ್ಟುತ್ತಾರೆ. ಮಡ ದ ಬಾಯನ್ನು ಪಂಚ ವಿಧದ ಎಲೆಗಳಿಂದ ತ್ತಾರೆ. ನಂತರ ಮಣ್ಣಿನ ತಟ್ಟೆಯಲ್ಲಿ ಕ್ಕಿ ಇಟ್ಟು ಅದರ ಮೇಲೆ ತೊಟ್ಟಿನಿಂದಾ ತ ಕುಂಕುಮ ಲೇಪಿತವಾದ ಎಳನೀರು ನ್ನು (ಪೂರ್ಣಫಲ) ಇಡುತ್ತಾರೆ. ಮಡ ರ ಭಾಗಕ್ಕೆ ಕುಂಕುಮ ಲೇಪಿತವಾದ ತ ಚಿತ್ರವನ್ನು ಬಿಡಿಸುತ್ತಾರೆ. ಇದನ್ನು ರ ಪುತ್ಥಳಿ' ಎಂದು ಕರೆಯುತ್ತಾರೆ. ಈಗ ಘಟ ಸಿದ್ಧವಾಯಿತು. ಈ ಪೂರ್ಣ ಘಟ ಂತ್ರ ಶಾಸ್ತ್ರದಲ್ಲಿ ಹೇಳಿರುವ ನಿಯಮದ ಬರೆದ ಸರ್ವತೋಭದ್ರ ಮಂಡಲ (ಅಷ್ಟ ಕ್ರ) ದ ಮೇಲಿಟ್ಟು ಪೂಜಿಸುತ್ತಾರೆ. ಇದು ಪೂಜೆಯ ವಿಧಾನ.

ದಳ ಪದ್ಮವು ಸ್ತ್ರೀಯರ ಜನನೇಂದ್ರಿಯ ಸಂಕೇತಿಸುತ್ತದೆ. ಪೂರ್ಣ ಘಟ ಮತ್ತು ೋಭದ್ರ ಮಂಡಲಗಳು—ಸಸ್ಯ, ಫಲಗಳು, ರ ಜನನೇಂದ್ರಿಯ, ಸಂತಾನವೃದ್ಧಿ ಇವು ಸಂಬಂಧವನ್ನು ಕಲ್ಪಿಸಿವೆ. ಮಣ್ಣಿನ ಮಡಕೆ ರ ಗರ್ಭವನ್ನು ಸಂಕೇತಿಸಿದರೆ, ಸಿಂಧೂರ ಯು ಗರ್ಭದಲ್ಲಿನ ಮಗುವನ್ನು ಸಂಕೇತಿ ೆ. ಮನುಷ್ಯರ ಸಂತಾನವೃದ್ಧಿಗೆ, ಸಸ್ಯ, ೆ ಸಮೃದ್ಧಿಯ ಸಂಬಂಧವನ್ನು ಕಲ್ಪಿಸುವ ಾರಣ ಹೀಗಿರಬಹುದು. ಸಸ್ಯ, ಸಂಪತ್ತು, ುರ ಸಂತಾನವೃದ್ಧಿಯಂತೆ ಸತತವಾಗಿ ತ್ತಲಿ ಎನ್ನುವ ಮೂಲ ಉದ್ದೇಶ ಇದಕ್ಕಿರ ದು. ತೆಂಗಿನ ಮರ, ಮಾವಿನ ಮರಗಳು ಬಿಟ್ಟಾಗ ಅವಕ್ಕೆ ಪೂಜಿಸುವ ಪದ್ಧತಿ ಲ್ಲಿರುವುದನ್ನು ಗಮನಿಸಬಹುದು. ದುರ್ಗಾ ಪೂಜೆಯು ಕೃಷಿ ಸಂಪತ್ತು ಮತ್ತು ಾನೋತ್ಪತ್ತಿಯಲ್ಲಿ ವಿಶಿಷ್ಟ ಪಾತ್ರ ವಹಿಸಿರು ನ್ನು ಅದರ ಉಗಮ ಹಾಗೂ ವಿಕಾಸದ ್ರಿಯಿಂದ ಅರಿಯಬಹುದು. ದುರ್ಗಾ ಪೂಜೆ ಬೌದ್ಧಿಕ ತಂತ್ರದಲ್ಲಿಯೂ, ಸಾಂಖ್ಯ ಶಾಸ್ತ್ರ ಯೂ ಬಳಕೆಯಲ್ಲಿರುವುದು ಕಂಡುಬರುತ್ತದೆ.

# ಶಕ್ತಿದೇವತೆಯ ವಿವಿಧ ಮುಖಗಳು

ಸಿಂಹ ವಾಹಿನಿಯಾದ, ಹತ್ತು ತೋಳುಗಳಿಂದ ಕೂಡಿದ (ಕೆಲವೆಡೆಗಳಲ್ಲಿ ಎಂಟು ಕೈಗಳು, ಹದಿನೆಂಟು ಕೈಗಳೂ ಇವೆ) ಸರ್ವಾಲಂಕಾರ ಭೂಷಿತೆಯಾದ ದೇವಿಯ ಕಮನೀಯವಾದ ವಿಗ್ರಹವು ಇತ್ತೀಚೆಗೆ ಎಲ್ಲ ಕಡೆಗಳಲ್ಲಿಯೂ ಕಂಡು ಬರುತ್ತದೆ. ಸಿಂಹದ ಮೇಲೆ ತನ್ನ ಬಲಗಾಲನ್ನಿಟ್ಟು, ಎಡಗಾಲಿನಿಂದ ಮಹಿಷಾಸುರನನ್ನು ಮೆಟ್ಟಿ ನಿಂತು, ತ್ರಿಶೂಲದಿಂದ ಅವನ ಎದೆಯನ್ನು ಸೀಳುತ್ತಿರುವ ದುರ್ಗೆಯ ಈ ರುದ್ರ ಭಯಂಕರ ರೂಪ ಜನಪ್ರಿಯವಾದುದು. ತನ್ನ ಪ್ರತಿಯೊಂದು ಕೈಯಲ್ಲಿಯೂ ಶಂಖ, ಬಾಣ, ಶಕ್ತಿ, ಚಕ್ರ, ಗುರಾಣಿ, ತ್ರಿಶೂಲ, ಗಂಟೆ, ಬಿಲ್ಲು, ಹಾವು—ಮುಂತಾದುವುಗಳನ್ನು ಹಿಡಿದಿದ್ದಾಳೆ. ಈಶ್ವರ, ಪಾರ್ವತಿ, ಕಾರ್ತಿಕೇಯ, ಗಣೇಶ, ಲಕ್ಷ್ಮಿ, ಸರಸ್ವತಿ-ಇವರೊಡನಿರುವ ದುರ್ಗೆಯ ಮೂರ್ತಿ 'ಅಭಯ ದುರ್ಗಾ' ಕೂಡ ಮುಖ್ಯವಾದ ಭಂಗಿ, ಸಿಂಹವಾಹಿನಿಯಾದ ದೇವಿಯ ಈ ರೂಪ ಬಹು ಕಾಲದವರೆಗೆ ಬಂಗಾಳದ ವಿಗ್ರಹಕಾರರಿಗೆ ತಿಳಿದಿರಲಿಲ್ಲವೆಂದು ಶ್ರೀ ಬಂದೋಪಾಧ್ಯಾಯರು ತಿಳಿಸುತ್ತಾರೆ. ಭಾರತದ ಅನೇಕ ಕಡೆಗಳಲ್ಲಿ ಕಂಡುಬರುವ ದುರ್ಗಾಮಾತೆಯ ಸ್ವರೂಪಗಳಲ್ಲಿ ವೈವಿಧ್ಯವಿರುವುದನ್ನು ಯಾರಾದರೂ ಗಮನಿಸಬಹುದು. ಉದಾ:—ಕೊಲ್ಲೂರಿನ ಮೂಕಾಂಬಿಕಾ ಲಿಂಗದಾಕಾರದಲ್ಲಿದ್ದರೆ, ಕದ್ರಿಯ ದೇವಿಯನ್ನು ಕಲ್ಲಿನ ಗುಡ್ಡದಲ್ಲಿ ಸ್ಥೂಲವಾದ ಆಕಾರದಲ್ಲಿ ಬಿಡಿಸಿದ್ದಾರೆ. ಚಿತ್ರಾಪುರದಲ್ಲಿ ಮಣ್ಣಿನ ಹುತ್ತವನ್ನು ದೇವಿಯೆಂದು ಪೂಜಿಸುತ್ತಾರೆ. ಮರದ ಕಂಭದಲ್ಲಿ ಕೊರೆದ ಸ್ಥೂಲವಾದ ಆಕಾರವನ್ನು ಒರಿಸ್ಸಾದಲ್ಲಿ ಕಾಂಬೇಶ್ವರಿ ಎಂದು ಪೂಜಿಸುತ್ತಾರೆ. ಕೋಲಾರದಮ್ಮ ಚೇಳಿನ ವಿಷವನ್ನು ಪರಿಹಾರ ಮಾಡುವ ಚೇಳಿನ ದೇವತೆಯೆಂದು ಪೂಜೆಗೊಳ್ಳುತ್ತಾಳೆ. ಹಾಸನದಮ್ಮ ಪೂರ್ಣಚಂದ್ರದ್ದಾಕಾರದಲ್ಲಿದ್ದು ಆ ಸ್ಥಳದ ಅಧಿದೇವತೆಯಾಗಿದ್ದಾಳೆ. ಹೀಗೆ ದೇವಿಯು ಹಲವು ಹತ್ತು ಬಗೆಯಲ್ಲಿ, ವಿವಿಧ ಆಕಾರ, ಸ್ವರೂಪಗಳಲ್ಲಿ, ವಿವಿಧ ಮಾಧ್ಯಮಗಳಲ್ಲಿ ಪೂಜೆಗೊಳ್ಳುವುದು ವಿಶೇಷ ಸಂಗತಿ.

ದುರ್ಗಾಷ್ಟಮಿಯಂದು ಆಯುಧಗಳನ್ನೂ, ಯಂತ್ರಗಳನ್ನೂ ಪೂಜಿಸುವ ಪದ್ಧತಿ ಅನಾದಿ ಕಾಲದಿಂದಲೂ ಇದೆ. ಆಯುಧ ಮತ್ತು ಯಂತ್ರ

---

**ಡಾ|| ಎನ್. ವಿ. ವಿಮಲ**

---

ಗಳು ಶಕ್ತಿಯ ಮೂಲಗಳು (Sources o Power and Energy) ಎಂಬ ಭಾವನೆ ಇ ಬಹುದು. ಬೇರೆಬೇರೆ ವೃತ್ತಿಯವರು ಬಳಸು ಹತ್ತು ಹಲವು ಬಗೆಯ ಆಯುಧಗಳನ್ನು ತಮ ವೃತ್ತಿಯ ವೃದ್ಧಿಗೋಸ್ಕರ ಆಯುಧ ಪೂಜೆಯಂ ಪೂಜಿಸುತ್ತಾರೆ. ಮಹಾಭಾರತದಲ್ಲಿ ಅರ್ಜು ದೇವಿಯ ಗುಣಗಾನ ಮಾಡುವ ಉಲ್ಲೇಖವಿ ವಿರಾಟಪರ್ವದಲ್ಲಿ ಪಾಂಡವರಿಗೆ ಶಮೀ ವೃಕ್ಷದಿಂ ಆಯುಧಗಳನ್ನು ಮತ್ತೆ ಪಡೆಯಲು ಸಹಕ ಅವರಿಗೆ ಮತ್ತಷ್ಟು ಆಯುಧ ವಿಶೇಷಗಳನ್ ದಯಪಾಲಿಸಿದವಳು ದುರ್ಗಾಮಾತೆ. ಕುರುಕ್ಷೇ ಯುದ್ಧಕ್ಕೆ ಮುಂಚೆ ದುರ್ಗಾದೇವಿಯು ಕಾ ಕೊಂಡು ಅರ್ಜುನನಿಗೆ ಆಶೀರ್ವದಿಸಿ ವಿಜ ಕೋರುತ್ತಾಳೆ. ಯಂತ್ರಗಳು — ಆಯುಧಗ ಪೂಜೆಗೊಳ್ಳುವ ಪದ್ಧತಿ ಹೀಗೆ ಮೊದಲಾ ಬಹುದು. ವಿಜಯದಶಮಿ ವಿಜಯ ಸಂಕೆ ವಾಗಿದೆ. ರಾಜಮಹಾರಾಜರು ಈ ದಿನ ಯುದ್ಧಕ್ಕೆ ಹೊರಡುತ್ತಿದ್ದರೆಂಬುದು ಇತಿಹಾ ಪುಟಗಳಿಂದ ತಿಳಿದುಬರುತ್ತದೆ. ಬನ್ನಿ ಮಂಟ ಹೋಗಿ ಬನ್ನಿಯ ಮರವನ್ನು ಪೂಜಿಸುವ ಪ ಯೂ ಇದೆ. ವಿಜಯನಗರದ ಅರಸರು, ಮೈ ರಿನ ಅರಸರು ದಸರಾ ಹಬ್ಬವನ್ನು ವೈಭವದ ಸಡಗರದಿಂದ ಆಚರಿಸುತ್ತಿದ್ದರೆಂಬುದು ಇತಿ ಪ್ರಸಿದ್ಧವಾಗಿದೆ. ಈ ನಾಡಹಬ್ಬದಲ್ಲಿ ಕಲಾ ರನ್ನೂ ಕವಿಗಳನ್ನೂ ಗೌರವಿಸುತ್ತಿದ್ದರು. ಮೈ ರಿನ ಅದಿದೇವತೆ ಚಾಮುಂಡಿ ಮೈಸೂರರಸರ



ದೇವತೆಯಾಗಿ ವಿರಾಜಿಸುತ್ತಿದ್ದಾಳೆ. ಹೀಗೆ ದಸರಾ ಅಥವಾ ನವರಾತ್ರಿ ಹಬ್ಬ ಧಾರ್ಮಿಕ, ಐತಿಹಾಸಿಕ ಹಾಗೂ ಸಾಮಾಜಿಕವಾಗಿ ಮಾನ್ಯತೆ ಪಡೆದು ಭಾರತೀಯ ಸಂಸ್ಕೃತಿಯ ಭವ್ಯ ಪರಂಪರೆಯನ್ನು ಎತ್ತಿ ಹಿಡಿದಿದೆ.

ಇನ್ನು ಗ್ರಾಮೀಣ ಜನರ ಬದುಕಿನಲ್ಲಿ ಸ್ತ್ರೀ ದೇವತೆಯ ಆರಾಧನೆ ಹಾಸುಹೊಕ್ಕಾಗಿರುವುದನ್ನು ಗಮನಿಸದೇ ಇರಲು ಸಾಧ್ಯವಿಲ್ಲ. ತಮ್ಮ ಸುಖ–ಸಂತೋಷಕ್ಕಾಗಿ, ಫಲಸಮೃದ್ಧಿಗಾಗಿ, ತಮಗಾದ ರೋಗ–ರುಜಿನ, ಸಾವು–ನೋವು ಸಂಕಟಗಳ ಪರಿಹಾರಕ್ಕಾಗಿ ಗ್ರಾಮದೇವತೆಗಳನ್ನು ಮೊರೆ ಹೋಗುವುದು ಪ್ರಾಣಿಬಲಿ ಕೊಡುವುದು–ಇವೆಲ್ಲ ಹಳ್ಳಿಗರ ಬದುಕಿನಲ್ಲಿ ದಿನನಿತ್ಯದ ಆಚರಣೆಗಳಾಗಿವೆ. ಮಾರಮ್ಮ, ಚೌಡೇಶ್ವರಿ, ಎಲ್ಲಮ್ಮ, ಮುತ್ಯಾಲಮ್ಮ, ದೊಡ್ಡಮ್ಮ–ಇತ್ಯಾದಿ. ದೇವತೆಗಳನ್ನು ಕೆಳವರ್ಗದ ಜನರು ಆರಾಧಿಸುತ್ತಾರೆ. ಅಣ್ಣಮ್ಮ ನಗರದೇವತೆ ಹಾಗೂ ಗ್ರಾಮದೇವತೆಯಾಗಿ ಪೂಜಾರ್ಹಳಾಗಿದ್ದಾಳೆ. ಸೀತಾಳ, ಷಷ್ಠಿದೇವಿ, ಮಾನಸಾದೇವಿ–ಮೊದಲಾದ ದೇವತೆಗಳು ಮಾನವನಿಗೊದಗಿದ ಸಂಕಟವನ್ನು ಪರಿಹಾರ ಮಾಡುವಲ್ಲಿ ಪ್ರಮುಖರು. ಸುಪ್ರಸಿದ ಕರಗದ ಹಿನ್ನೆಲೆ ಶಕ್ತಿಯೇ ಆಗಿದೆ.

ಈ ಸಂದರ್ಭದಲ್ಲಿ ಮತ್ತೊಂದು ಅಂಶದ ಕಡೆಗೆ ನಿಮ್ಮ ಗಮನ ಸೆಳೆಯಲು ಬಯಸುತ್ತೇನೆ. ಅದೆಂದರೆ, ನಮ್ಮ ಜನರ ಅಜ್ಞಾನ, ಮೂಢ ನಂಬಿಕೆಗಳನ್ನೇ ಮೂಲ ಬಂಡವಾಳ ಮಾಡಿಕೊಂಡು ಅಮಾಯಕ ಜನರನ್ನು ಸುಲಿಗೆ ಮಾಡುತ್ತಿರುವ, ಧರ್ಮದ ದೇವರ ಹೆಸರಿನಲ್ಲಿ ಹೆಣ್ಣು ಮಕ್ಕಳ ಮಾನ–ಪ್ರಾಣಗಳನ್ನು ಪಣಕ್ಕೊಡ್ಡಿ ಅವರನ್ನು ಅಮಾನವೀಯ ರೀತಿಯಲ್ಲಿ ನಡೆಸಿಕೊಂಡು ಅವರನ್ನು ಬಲಿಪಶುಗಳನ್ನಾಗಿ ಮಾಡುತ್ತಿರುವ ಸಮಾಜಘಾತುಕ ಆಷಾಢಭೂತಿಗಳ ವಂಚನೆ–ಮೋಸಗಳ ವಿರುದ್ಧ ನಮ್ಮ ಪ್ರಜ್ಞಾವಂತ ಯುವಶಕ್ತಿ ಹೋರಾಟ ನಡೆಸಬೇಕಾಗಿದೆ. ದೇವಸ್ಥಾನಗಳು–ಮಠಗಳು ವ್ಯಾಪಾರೀ ಸಂಸ್ಥೆಗಳಾಗುತ್ತಿವೆ. ಒಬ್ಬ ಮಹಿಷಾಸುರ, ಚಂಡ–ಮುಂಡ, ಶುಂಭ – ನಿಶುಂಭರು ನಾಶವಾದ ಮಾತ್ರಕ್ಕೆ–ರಾಕ್ಷಸತನ, ರಾಕ್ಷಸ ಬುದ್ಧಿ, ದುಷ್ಟತನ, ನೀಚತನಗಳು ಸಂಪೂರ್ಣವಾಗಿ ಮರೆಯಾಗಲಿಲ್ಲ. ಅದು ಮನುಕುಲ ಇರುವವರೆಗೂ ಒಂದಲ್ಲ ಒಂದು ರೀತಿಯಲ್ಲಿ ಬೇರೆ ಬೇರೆ ಮುಖವಾಡ ಧರಿಸಿ ಪ್ರಕಟವಾಗುತ್ತಿರುವುದನ್ನು ಈ ನಾಗರಿಕ ಪ್ರಪಂಚದಲ್ಲಿಯೂ ಕಾಣುತ್ತಿದ್ದೇವೆ. ಎಲ್ಲೆಲ್ಲಿಯೂ ತಾಂಡವಾಡುತ್ತಿರುವ ಬಡತನ, ಹಿಂಸೆ, ಅನ್ಯಾಯ, ಅಧರ್ಮಗಳ – ವಿರುದ್ಧ ಹೋರಾಡಬೇಕಾದುದು ಎಲ್ಲಾ ಪ್ರಜ್ಞಾವಂತರ, ಮಾನವ ಪ್ರೇಮಿಗಳ ಕರ್ತವ್ಯವಾಗಿದೆ. ಇದನ್ನೇ ನಮ್ಮ ಎಲ್ಲಾ ಧರ್ಮ ಗ್ರಂಥಗಳೂ ಸಾರುತ್ತಿವೆ. ಹಿಂಸೆಗೆ ಪ್ರತಿಹಿಂಸೆಯ ಬದಲು, ಮಾನವ ದಾನವನಾಗದೆ ಮಾನವನಾಗಿ ಬಾಳುವಂತಾಗಬೇಕು. 21ನೆಯ ಶತಮಾನಕ್ಕೆ ಕಾಲಿಡುತ್ತಿರುವ ನಮಗೆ, ನಮ್ಮ ಎಲ್ಲ ಸಂಪನ್ಮೂಲಗಳನ್ನೂ ವನಸ್ಪತಿಗಳನ್ನೂ ರಕ್ಷಿಸುವ, ವೃದ್ಧಿಸುವ ಮತ್ತು ಆರೋಗ್ಯಪೂರ್ಣ ಸಮಾಜವನ್ನು ನಿರ್ಮಿಸುವ ಜವಾಬ್ದಾರಿಯನ್ನು ಹೊರುವ ಕಾಲ ಸನ್ನಿಹಿತವಾಗಿದೆ. ಇದು ನಮ್ಮ ಯುವ ಪೀಳಿಗೆಗೆ ಒಂದು ಸವಾಲಾಗಬೇಕಾಗಿದೆ. ಯುವಶಕ್ತಿ ... ಕಾರ್ಯಪ್ರವೃತ್ತವಾಗಬೇಕಾಗಿದೆ.

ಇದುವರೆಗೆ, ಶಕ್ತಿದೇವತೆಯ ವಿ... ಗಳನ್ನೂ, ಭಾರತದಲ್ಲಿ ಶಕ್ತಿಪೂಜೆಯ ಅದರ ವ್ಯಾಪಕತೆ, ಶಾಕ್ತಾಗಮಗಳಲ್ಲಿ ವಾಗಿರುವ ಸಾಂಕೇತಿಕತೆ ಹಾಗೂ ಪೂಜೆಯ ಮಹತ್ವವನ್ನು ಗಮನಿಸಿದೆ ಸತ್ ವಿಪ್ರಾ ಬಹುಧಾ ವದಂತಿ'-ಎನ... ಕ್ತಿಯಂತೆ ದೇವಿಯು ಒಬ್ಬಳೇ ಅದ... ಹೆಸರುಗಳಿಂದ ಪೂಜಾರ್ಹಳಾಗಿದ್ದಾ... ದೇವಿಯ ಪೂಜೆಯ ವಿಧಿವಿಧಾನಗಳು ಯಾದರೂ ಆರಾಧನೆಯ ಗುರಿ, ಉ... ಒಂದೇ ಆಗಿರುತ್ತದೆಂಬುದು ಸತ್ಯಸಂ... ದಿಂದ ಸತ್ಯದೆಡೆಗೆ, ತಮಸ್ಸಿನಿಂದ ಜ್ಯೋ... ಮೃತ್ಯುವಿನಿಂದ ಅಮೃತತ್ವದೆಡೆಗೆ"–... ಮನುಷ್ಯನ ಬದುಕಿನ ಗುರಿಯಾಗಿರ... ಒಂದು ಬೆಳಕಿನ ಎಚ್ಚರ ಮೂಡುವ... ಆರಾಧನೆಗೆ ಅರ್ಥವಿಲ್ಲ. ಬಾಹ್ಯಾ... ಗಿಂತ ಮಾನಸಿಕ ಕಲ್ಮಷ ಕಳೆಯುವ ಶುದ್ಧ ಭಕ್ತಿ ನಿಜವಾದ ಪೂಜೆಯಾಗ... ಪೂಜೆಗೆ ನಿಜವಾದ ಅರ್ಥ ಬರುತ್ತದೆ. ಉಂಟಾಗುತ್ತದೆ.

ಸಮಸ್ತ ಜೀವರಾಶಿಗೆ ಮ... ಸರ್ವರ ಕಲ್ಯಾಣವನ್ನೂ, ವಿಶ್ವಶ... ಕೋರುವ ಮತ್ತು ಜಗತ್ತು ಸ... ಸಕಲ ಸಮೃದ್ಧಿಯನ್ನು ಹೊಂದಬೇ... ಯಿಂದ ದೈವೀಶಕ್ತಿಯ ಅನುಗ್ರಹಕ್ಕೆ ಬೇಕೆಂದು ಬಯಸಿದ ಮತ್ತು ... ನಮ್ಮ ಎಲ್ಲ ಹಿರಿಯ ದಿವ್ಯಚೇತ... ನಮನಗಳು.

ಯಾ ದೇವೀ ಸರ್ವಭೂತೇಷು
ವಿಷ್ಣುಮಾಯೆ...
ನಮಸ್ತಸ್ಯೈ, ನಮಸ್ತಸ್ಯೈ,
ನಮಸ್ತಸ್ಯೈ ನ...

(ಯಾವ ದೇವಿಯು ಸರ್ವ ಪ್ರಾ... ಮಾಯೆ ಎಂದು ಕರೆಯಲ್ಪಡುವ... ಪುನಃ ಪುನಃ ನಮಿಸುತ್ತೇವೆ.)

ಯಾ ದೇವೀ ಸರ್ವಭೂತೇಷು
ಶಕ್ತಿರೂಪೆ...
ನಮಸ್ತಸ್ಯೈ, ನಮಸ್ತಸ್ಯೈ
ನಮಸ್ತಸ್ಯೈ, ನ...

(ಯಾವ ದೇವಿಯು ಸರ್ವ ಪ್ರಾ... ರೂಪದಲ್ಲಿರುವಳೋ ಅವಳನ್ನು ಪ... ಸುತ್ತೇನೆ.)

(ತಾ|| 12–10–1986 ರಂ... ವಿದ್ಯಾಭವನದಲ್ಲಿ ನೀಡಿದ ಉಪ... ರೂಪ.)


**ಸಂದರ್ಶಿಸಿ** **ಆನಂದಿಸಿ**

ಶ್ರೀ ವೆಂಕಟೇಶ್ವರ
ಪುರಾವಸ್ತು ಸಂಗ್ರಹಾಲಯ

(ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯದ ಎದುರು)

**ಸಾವಿರ ಕಂಬದ ಸಭಾಂಗಣ**

ತಿರುಮಲೆ.

ಲೋಹ, ಮೃಚ್ಛಿಲಾದಾರು ಕೆತ್ತನೆಗಳ, ವಿವಿಧ ಸಂಗೀತೋಪಕರಣಗಳ, ಮಧ್ಯ, ಪ್ರಾಚೀನ ಕಾಲದ ಆಯುಧಗಳ, ಮಿಗಿಲಾಗಿ – ತಿ. ತಿ. ದೇವಸ್ಥಾನಗಳ ವಿವರಗಳ ಅಪೂರ್ವ ಸಂಗ್ರಹಾಲಯ.

ಪ್ರವೇಶ ದರ : ರೂ. 1-00 ಮಾತ್ರ.

ಒಂದು ಕಾಲದಲ್ಲಿ ಬದುಕನ್ನು ಅದು
ಸ್ವೀಕರಿಸಿ; ಅದನ್ನು ಸವಾಲೆಂದು ಬಗೆದು;
ಸಾಗರವನ್ನು ಸಮರ್ಥವಾಗಿ ಈಜಿ ದಡ
ಅಲ್ಲದೆ; ಆ ಪಯಣದಲ್ಲಿ ತಾವು ಪಡೆದ
ಸ್ಸವನ್ನೂ ತಮ್ಮ ಹಾಡುಗಳಲ್ಲಿ ಸೆರೆ
ಸಾಂಗವೊಂದಿತ್ತು. ಅವರನ್ನೇ ಕವಿರಾಜ
ಕಾರನು "ಕುರಿತೋದದೆಯುಂ ಕಾವ್ಯ
ಗ ಪರಿಣತಮತಿಗಳ್" ಎಂದು ಸಾರಿದ್ದು.
ತಿಯನ್ನು ಕೇಳಿದಾಗ, ನೋಡಿದಾಗ
ಾದರೂ ಆಶ್ಚರ್ಯವಾಗದಿರದು. ಯಾರು
ಣತಮತಿಗಳ್" ಎಂಬ ಪ್ರಶ್ನೆ ನಮ್ಮೆದುರು
ನಮ್ಮ ಮನದಲ್ಲಿ ಮೂಡುವವರೆಂದರೆ
ನ ಕವಿಗಳು". ಆ ಅನಕ್ಷರಸ್ಥರು ಹೇಗೆ
ಪ್ರಯೋಗಮಾಡಬಲ್ಲರು ಎಂದು ನಾವು
ಮುರಿಯ ಬೇಕಿಲ್ಲ. ಬರವಣಿಗೆಯ ಶಕ್ತಿ
ದ್ದರೇನಂತೆ, ಕಾವ್ಯರಚನಾ ಪ್ರತಿಭೆ ಬಾಯಿ
ಮಲ್ಲೂ ಕೂಡ ಒಡಮೂಡಬಹುದೆಂಬು
ನಪದ ಸಾಹಿತ್ಯ ಅತ್ಯುತ್ತಮ ಉದಾಹ
ವರು ಒಳಸುವ ಉಪಮೆ, ರೂಪಕ–ಈ
ಲಂಕಾರಗಳು ಯಾವ ಶಾಸ್ತ್ರಜ್ಞನ ಮನ
ಕದಡಬಲ್ಲವು. ಇನ್ನು ಸಹೃದಯವಾಚಕರ
ಅವು ಬೀರುವ ಪರಿಣಾಮವಂತೂ ಅಗಾಧ.

ಪದರ ಹೃದಯದಲ್ಲಿ ಹೆಪ್ಪುಗಟ್ಟಿದ ಭಾವ
, ಅವು ಆಯಾ ವ್ಯಕ್ತಿಯ ಹಾಗೂ ಕೇವಲ
ಸಂದರ್ಭದ ಜೀವನ ಚಿತ್ರಣವಾಗಿ ನಿಲ್ಲದೆ,
ಕಾಲಿಕವಾದ ನಿತ್ಯಸತ್ಯವನ್ನು ಒಳ
ಇದ್ದು ಎಂಥ ವಿದ್ವಾಂಸರನ್ನೂ, ವಿಮರ್ಶಕ
ಸೆರೆಹಿಡಿಯಬಲ್ಲವು. ಅಂಥ ಹಾಡುಗಳಲ್ಲಿ
ತನನ ತುಡಿತ ಮಿಡಿತವನ್ನು ಸಮರ್ಥ
ಚಿತ್ರಿಸುವ ಪಲುಕುಗಳೂ ಕೂಡ ಇದ್ದು,
ಬದುಕನ್ನು ಯಥಾವತ್ತಾಗಿ ಚಿತ್ರಿಸುತ್ತವೆ.

ಣ್ಣಿಗೆ ಅದರಲ್ಲೂ ಜನಪದ ಮುಗ್ಧ ಹೆಣ್ಣಿಗೆ
ತ್ತನ ವರದಾನವಿದ್ದಂತೆ. ಅವಳ ತಾಯ್ತನವೇ
ಬದುಕಿನ ಎಲ್ಲಾ ಕುಂದು ಕೊರತೆಗಳನ್ನು
ಪಬಲ್ಲ ಸಾಧನ. ಹಾಗಾಗಿ ಬಂಜೆತನವನ್ನು
ಒಂದು ಶಾಪವೆಂದೇ ಪರಿಗಣಿಸುತ್ತಾಳೆ.
ಪದ ಕೊಳೆಯನ್ನು ತೊಳೆದು ಕೊಳ್ಳಲು
ು ನಾನಾ ರೀತಿಯಾಗಿ ಹಲುಬುತ್ತಾಳೆ.
ವನ್ನು ಕಾಡಿ ಬೇಡುತ್ತಾಳೆ. ಅವಳು ದೈವ
'ಅಷ್ಟೈಶ್ವರ್ಯ, ಭೋಗಭಾಗ್ಯಗಳಿಗಾಗಿ'
ಮೂ ಬೇಡುವುದಿಲ್ಲ. ಅವಳ ನಿಜವಾದ ಕೋರಿಕೆ
ಬುದು ಅವಳ ಈ ಕೆಳಗಿನ ಪಲುಕು ಸೆರೆ
ದಿದೆ–

ಕಂದಾನ ಕೊಡು ಶಿವನೆ ಬಂಧಾನ ಪಡಲಾರೆ
ಹಂಗೀನ ಬಾನ ಉಣಲಾರೆ–ಮರ್ತ್ಯದಾಗ
ಬಂಜೆಂಬ ಶಬುದ ಹೊರಲಾರೆ

–ಎಂಬ ಈ ಮಾತುಗಳಲ್ಲಿ, ಸಂಸಾರದ ಕಷ್ಟ ಕಾರ್ಪಣ್ಯಗಳ, ಆಗು ಹೋಗುಗಳ ಭಾರವನ್ನೆಲ್ಲಾ ಸರಾಗವಾಗಿ ಹೊರಬಲ್ಲಳು, ಆದರೆ 'ಬಂಜೆತನ'ದ ಲೋಪ, ದೋಷದ ಹೊರೆ ಅವಳಿಂದ ಹೊರಲಾಗದು ಎಂಬುದು ಅಡಕವಾಗಿದೆ. ಅದೂ ಅಲ್ಲದೆ ಬಂಜೆತನದ ಕಡು ಅನುಭವ ಅವಳಿಗಾಗಿದೆ ಅಂತೆಯೇ–



ಬಾಲಕರಿಲ್ಲದ ಬಾಲಿದ್ಯಾತರ ಜನ್ಮ
ಬಾಡೀಗಿ ಎತ್ತು ದುಡಿದ್ಹಂಗ–ಬಾಳೀಯ
ಹಾಸ್ಯಂಡು ಬೀಸಿ ಒಗೆದ್ಹಂಗ

ಎಂಬ ಜುಗುಪ್ಸೆಯ ಉದ್ಗಾರ ಅವಳಿಂದ ಹೊರಟಿದೆ. ಅವಳು ತನ್ನ ಈ ಬೇಡಿಕೆಗೆ ಮತ್ತೊಂದು ಕಾರಣವನ್ನೂ ಕೂಡ ನೀಡುತ್ತಾಳೆ.

ಹೊಂದಿದ್ದಾಳೆ; ನವಮಾಸ ಗರ್ಭದಲ್ಲಿ ಧರಿಸಿ ಕ
ದಿದ್ದಾಳೆ. ಈ ಎಲ್ಲಾ ಮಾನಸಿಕ, ದೈಹಿಕಯಾ
ಅವಳಿಗಾದಷ್ಟು, ಮತ್ಯಾರಿಗಾಗಿದೆ. ಹೇಗ
ಮಗು ಬೆಳೆದು ದೊಡ್ಡದಾಗುತ್ತದೆ. ಅದರ

# ಜಾನಪದ ತಾಯಿಯ ಆಶೋತ್ತರ

ಬಂಜೇಯ ಮನೆಮುಂದೆ ಅಂಕೂರ ಗಿಡಹುಟ್ಟಿ
ಕೊಂಬೆ ಕೊಂಬೆಗೆ ಗಿಣಿಕೂತು ಹೇಳ್ಯಾವ
ಬಂಜೆ ನಿನ ಬಾಳು ಹೆರವರಿಗೆ

–ಎಂಬಂತೆ ಅವಳಿಗೆ ಸುತ್ತ ಮುತ್ತ ಎಲ್ಲ ಕಡೆಯಿಂದಲೂ ಕಟಕಿ, ಅಣಕಗಳೇ ಕೇಳಿ ಬರುತ್ತಿರುವಾಗ ಅವಳಾದರೂ ಹೇಗೆ ಸುಮ್ಮನಿದ್ದಾಳು. ಅಲ್ಲದೆ ಪಶು ಪಕ್ಷಿಗಳೆಲ್ಲಾ ಈ ತಾಯ್ತನದ ಸುಖ ಅನುಭವಿಸುವಾಗ ತನಗೆ ಮಾತ್ರ ಆ ಸುಖವಿಲ್ಲ ಎನಿಸುತ್ತದೆ.

ಹೀಗೆ ನಾನಾ ರೀತಿಯಾಗಿ ಹಲುಬಿ ಹಂಬಲಿಸಿ ಮಗುವನ್ನೇನೋ ಪಡೆಯುತ್ತಾಳೆ. ಹುಟ್ಟುವ ಕೂಸು ಗಂಡೇ ಆಗುತ್ತದೆಂದು ಭರವಸೆ ಏನು ಒಂದು ಪಕ್ಷ ಹೆಣ್ಣಾದರೂ ಆಗಬಹುದು. ಅವಳಿಗೆ ಯಾವುದಾದರೂ ಸರಿಯೆ ಆದರೆ ಅತ್ತೆಯ ಮನೆಯವರು ಏನನ್ನುವರೋ? ಹಾಗಾಗಿ–

ಹೆಣ್ಣು ಹುಟ್ಯಾದಂತ ಹೇಳಿ ಖಳುವಲಿಬ್ಯಾಹ
ಹೆಣ್ಣೆಂದರವರು ಹೆದರ್‍ಯಾರ–ಕಂದನ್ನ
ಹೆಣ್ಣಲ್ಲ ನಮಗ ರವಿಚಿನ್ನ

ಎನ್ನುತ್ತಾಳೆ. ಇಲ್ಲಿ ಅವಳ ಮಗುವು ರವಿಚಿನ್ನ. ಏಕೆಂದರೆ ಅದಕ್ಕಾಗಿ ಎಷ್ಟು ಹರಕೆ ಹಾರೈಕೆ

**ಭಾರ್ಗವಿಶ್ರೀ**

ದಿನದ ಬೆಳವಣಿಗೆಯಲ್ಲೂ ತಾಯಿ ನೂರೊ
ಕನಸು ಕಾಣುತ್ತಾಳೆ.

ಕುಂತಾಡು ಮಗಳೀಗಿ ಕೂಡಲ ಬಿಟ್ಟೀನ
ನಗರಾದ ಜಾರಿ ತರಸೇನ–ಮನೆಯಾಗ
ತಮ್ಮಾಗ ಧಾರಿ ಎರೆದೇನ

ಎನ್ನುವ ಅವಳ ಈ ಆಸೆಯಲ್ಲಿ
ಸ್ವಾರ್ಥವೂ ಇಣುಕಿದೆ. ಆದರೆ ಅದೂ ಸಹ
ಎರಡು ಉದ್ದೇಶವನ್ನೂ ಒಂದೇ ಬ
ಹೊಂದುವ ಆಕಾಂಕ್ಷೆ ಅವಳಿಗೆ. ಒಂದು ತವ
ಹೆಂಡತಿಯಾಗಿ ತನ್ನ ಮಗಳೇ ಹೋದರೆ ಇ
ತವರಿನ ಸಂಬಂಧ ಉಳಿಯುತ್ತದೆ.
ಗಿನ ಹೆಣ್ಣಾದರೆ ತನಗಲ್ಲಿ ತವರಿನ ಬಾಂಧವ
ವಾಗುತ್ತದೋ ಎಂಬ ಅಳುಕು. ಹಾ
ಮಗಳೂ ಕೂಡ ತಟ್ಟೆ ಬಟ್ಟಲು ತೊಳೆಯಲು
ಯಳು, ಅಡಿಗೆ ಬಾರದು, ಬರಿದೇ ಕಥೆ,
ಹೇಳುತ್ತಾ ಮನೆಯವರನ್ನು ನಗಿಸುತ್ತಾ
ಕಳೆಯುತ್ತಿದ್ದವಳು, ಹಾಗಾಗಿ ಬೇರೆ ಮನೆಗೆ
ಳನ್ನು ಕೊಟ್ಟರೆ ಅಲ್ಲಿ ಅವಳು ಯಾರ್‍ಯಾರ ಅ
ಸ್ಕೃತ್ಯ, ತಿರಸ್ಕಾರಕ್ಕೆ ಒಳಗಾಗ ಬೇಕೋ ಅ
ತನ್ನ ತೌರುಮನೆಯಾದರೆ ತನ್ನ ತಾ
ಅತ್ತೆಯಾಗದೆ, ಅಜ್ಜಿಯಾಗಿಯೂ ತನ್ನ ಮ
ಸಾಕುವಳೆಂಬ ಭರವಸೆ, ನೆಮ್ಮದಿ ಅ
ಹೇಗೋ ಮಗಳು ಬೆಳೆದು ದೊಡ್ಡವಳಾಗು
ಆಗ ಅವಳ ಆತಂಕ ಮತ್ತಷ್ಟು ಇಮ್ಮಡಿಸ

# ತಿರುಮಲೆ ತಿರುಪತಿ ದೇವಸ್ಥಾನಗಳು

# ಶ್ರೀವೆಂಕಟೇಶ್ವರ ನಿತ್ಯ ಅನ್ನದಾನ ಯೋಜನೆ

ಅನ್ನದಾನ ಮಾಡುವುದಕ್ಕಿಂತ ಮಿಗಿಲಾದ ಪವಿತ್ರ ದಾನ ಮತ್ತೊಂದಿಲ್ಲ. ಅದರಲ್ಲೂ ಶ್ರೀ ವೆಂಕಟೇಶ್ವರಸ್ವಾಮಿಯ ಆವಾಸವಾದ ತಿರುಮಲೆಯಲ್ಲಿ ಯಾತ್ರಿಕರಿಗೆ ಅನ್ನದಾನ ಮಾಡುವುದು ಮತ್ತೂ ಪುಣ್ಯಕರವಾದದ್ದು. ತಿ. ತಿ. ದೇವಸ್ಥಾನಗಳು ತಿರುಮಲೆಯಲ್ಲಿ ಯಾತ್ರಿಕ ಭಕ್ತರಿಗೆ ಉಚಿತ ಭೋಜನ ನೀಡುವ 'ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನ ಯೋಜನೆ' ಯನ್ನು ಆಚರಣೆಗೆ ತಂದಿವೆ.

## ಯೋಜನೆಯ ಕಾರ್ಯರೂಪ :

* ಯಾರಾದರೂ 12.5 ಲಕ್ಷ ರೂಗಳು ಅಥವಾ ಅದರ ಗುಣಕಗಳನ್ನು ದತ್ತಿ ನೀಡಬಹುದು. ತಿ.ತಿ. ದೇವಸ್ಥಾನಗಳು ಈ ದತ್ತಿಗೆ ಸಮನಾದ ಧನವನ್ನು ಸೇರಿಸಿ, ಒಟ್ಟು ಮೊತ್ತದ ಮೇಲಣ ವಾರ್ಷಿಕ ಬಡ್ಡಿಯಿಂದ ದಿನವೊಂದಕ್ಕೆ 500 ಮಂದಿಗೆ ಉಚಿತ ಭೋಜನ ವ್ಯವಸ್ಥೆ ಮಾಡುತ್ತದೆ. ರೂ 10 ಲಕ್ಷ ನೀಡಿದಲ್ಲಿ ಇನು ಮುಂದೆ ಪ್ರತಿದಿನ 400 ಮಂದಿಗೆ ಮಾತ್ರ ಉಚಿತ ಭೋಜನ ನೀಡಲಾಗುವುದು.
* ಈಗಾಗಲೇ ರೂ 10 ಲಕ್ಷ ದತ್ತಿ ನೀಡಿರುವವರ ಹೆಸರಿನಲ್ಲಿ ಪ್ರತಿದಿನ 500 ಮಂದಿಗೆ ಭೋಜನ ವ್ಯವಸ್ಥೆ ಮಾಡಲಾಗುವುದು. (ಉಳಿಕೆ ಹಣ ತಿ.ತಿ.ದೇ. ನಿಧಿಯಿಂದ ಹಾಕಲಾಗುತ್ತದೆ).
* ದತ್ತಿಯನ್ನು ವ್ಯಕ್ತಿ, ಸಂಸ್ಥೆ, ಸಂಘಗಳು ನೀಡಬಹುದು.
* ಊಟದ ಕೋಣೆಯಲ್ಲಿ ದಾನಿಗಳ ಹೆಸರನ್ನು ಪ್ರಮುಖವಾಗಿರುವಂತೆ ಬರೆಯಿಡಲಾಗುವುದು.

## ದಾನಿಗಳಿಗೆ ದೊರೆಯುವ ಸೌಲಭ್ಯಗಳು :

* ವರ್ಷಕ್ಕೊಮ್ಮೆ ಮೂರುದಿನಗಳ ಕಾಲ ತಿರುಮಲೆಯಲ್ಲಿ ದಾನಿಯ ಹಾಗೂ ಅವರ ಕುಟುಂಬದವರಿಗೆ ಉಚಿತ ವಸತಿ, ಹಾಗೂ ವಿರಾಮದ ವೇಳೆಯಲ್ಲಿ ದರ್ಶನ ಆರತಿಯನ್ನು ಒದಗಿಸಲಾಗುವುದು.
* ದಾನಿಗಳ ಈ ದಾನಕ್ಕೆ 80 (G) ಕಲಮಿನಂತೆ ಆದಾಯಕರ ಮಾಫಿ ಉಂಟು.
* ದಾನಿಗಳನ್ನು ಈ ಯೋಜನೆಯ ಕಾರ್ಯಾಚರಣೆಯ ಉಸ್ತುವಾರಿ ನೋಡಲು ಸಲಹಾಸಮಿತಿ ಸದಸ್ಯರನ್ನಾಗಿ ಮಾಡಿಕೊಳ್ಳಲಾಗುವುದು.
* ಈವರೆಗೆ ದತ್ತಿನೀಡಿದವರ ವಿವರಗಳು ಈ ರೀತಿ ಇವೆ

| | | |
|---|---|---|
| 1. | ಶ್ರೀ ಎಲ್. ವಿ. ರಾಮಯ್ಯ, ಮದ್ರಾಸ್ | ರೂ 10 ಲಕ್ಷ |
| 2. | ಶ್ರೀ ಮಾನಸಿಂಗ್ ಶಾ, ಬೊಂಬಾಯಿ | ರೂ 20 ಲಕ್ಷ |
| 3. | ಶ್ರೀ ಆರ್. ಪಿ. ಗೋಯಂಕ, ಕಲ್ಕತ್ತ | ರೂ 10 ಲಕ್ಷ |
| 4. | ಶ್ರೀ ಈಶ್ವರಪ್ರಸಾದ ಪೋದ್ದಾರ್, ಕಲ್ಕತ್ತ | ರೂ 10 ಲಕ್ಷ |
| 5. | ಶ್ರೀ ಧೀರೂಭಾಯಿ ಅಂಬಾನಿ (ರಿಲಯನ್ಸ್ ಟೆಕ್ಸ್‌ಟೈಲ್ಸ್. ಬೊಂಬಾಯಿ) | ರೂ 10 ಲಕ್ಷ |
| 6. | ಶ್ರೀ ಬಿ. ಎಂ. ಖೈತಾನ್. ಕಲ್ಕತ್ತ | ರೂ 10 ಲಕ್ಷ |
| 7. | ಶ್ರೀ ಭಬ್ರಿಯಾ ಚಾರಿಟಿ ಟ್ರಸ್ಟ್, ಬೊಂಬಾಯಿ | ರೂ 10 ಲಕ್ಷ |
| 8. | ಶ್ರೀ ರಾಮನಾಥಗೋಯಂಕಾ, ಮದರಾಸು. | ರೂ 10 ಲಕ್ಷ |
| 9. | ಶ್ರೀ ಹೇಮರಾಜ ಪೋದ್ದಾರ್ ಚಾರಿಟಿ ಟ್ರಸ್ಟ್, ಕಲ್ಕತ್ತ | ರೂ 10 ಲಕ್ಷ |

**ಇದುವರೆಗಿನ ಪ್ರತಿಕ್ರಿಯೆ ಅತ್ಯುತ್ತಮ.**

**ಯಾತ್ರಿಕರಿಗೆ ಹೆಚ್ಚಿನ ಸೇವೆ ಸಲ್ಲಿಸಲು ಉದಾರವಾಗಿ ನೀಡಿರಿ.**

ಹೆಚ್ಚು ವಿವರಗಳಿಗೆ ಕೂಡಲೇ ಬರೆಯಿರಿ :

**ಕಾರ್ಯನಿರ್ವಹಣಾಧಿಕಾರಿ, ತಿ. ತಿ. ದೇವಸ್ಥಾನಗಳು, ತಿರುಪತಿ–೫೧೭೫೦೧ ಆಂ.ಪ್ರ.**

ಆಗು ಹೋಗುಗಳದೇ ಸದಾ ಚಿಂತೆಯಾ
ಅದರ ನಿವಾರಣೆಗಾಗಿ–

ತ್ತಾಣಿ ಕಟ್ಯಾಳ ಕಟ್ಟಿ ಮ್ಯಾಲ ನಿಂತಾಳ
ಲು ಗಣ್ಣು ತಿರುವ್ಯಾಳ–ಕಂದವ್ವ
ಸೋಕ್ಯಾವು ಒಳಗ್ಹೋಗ–

ತ್ತಾಳೆ. ಅಂದರೆ ಅವಳ ಮಗಳ ರ್ಯ ಎಂಥವರ ಕಣ್ಣನ್ನೂ ಕುಕ್ಕುವಂತಿದೆ. ುವಲ್ಲಿ ಅವಳಿಗೆ ಯಾರದ್ದಾದರೂ ವಕ್ರದೃಷ್ಟಿ ಏನಾದರೂ ತೊಂದರೆಯಾದಲ್ಲಿ. ಕಂದವ್ವ ತ್ತಾಳೆಂದು ಅವಳಿಗೆ ಅಳುಕು. ಹೀಗೆ ನ್ನು ಬೆಳೆಸಿ ದೊಡ್ಡವಳನ್ನಾಗಿ ಮಾಡು . ಮಗಳ ಮದುವೆಯ ಚಿಂತೆ ತಲೆಹತ್ತು ಕಷ್ಟವೋ ಸುಖವೋ ಮದುವೆ ಮಾಡಿದ ರ ಮಗುವನ್ನು ಇನ್ನೊಬ್ಬರ ಮನೆಗೆ ಕಳು ವಾಗ ಅವಳ (ಮನ) ಒಡಲು ತೊಳಲಾಡಿ ಗುತ್ತದೆ–

ತ್ತು ತಿಂಗಳು ನಿನ್ನ ಹೊತ್ತುಗೊಂಡು
ತಿರುಗೇನ
ುತ್ತು ಸುರುವಿದರ ಬರಿ ಉಡಿಯು–ನನಮಗಳ
ತ್ತೇರಿ ಗೊಪ್ಪಿಸಿ ಕೊಡಲ್ಹ್ಯಾಂಗ

ು ಧರ್ಮಸಂಕಟಕ್ಕೊಳಗಾಗುತ್ತಾಳೆ. ಆದ ., ಕೊಟ್ಟ ಹೆಣ್ಣು ಕುಲಕ್ಕೆ ಹೊರಗುತಾನೆ. ರಿಗೆ ವಿಧಿಯಿಲ್ಲದೆ,

ಎಲ್ಲಾದರೂ ಇರಲವ್ವ ಹುಲ್ಲಾಗಿ ಬೆಳೆಯಾಲಿ
(ಹುಣಸೆ) ನೆಲ್ಲೀ ಬುಡ್ಯಾಗಿ ಚಿಗಿಯಾಲಿ–
ನನಕಂದ
ಜಯವಂತ ಳಾಗಿ ಬೆಳೆಯಾಲಿ

ಎಂಬ ಸಮಾಧಾನ ಹೊಂದುತ್ತಾಳೆ. ಬದುಕಿ ಒಂದು ಹಂತದ ಜವಾಬ್ದಾರಿ ಮುಗಿದಂತೆ ಮುಕ್ತಳಂತೆ ತೃಪ್ತಳಾಗುತ್ತಾಳೆ.

ಆದರೆ ಅವಳ ಜೀವನಕ್ಕೆ ಮತ್ತೊಂದು ಮುಖವೂ ಯುಷ್ಟೆ. ಅದೆಂದರೆ ಅವಳಿಗೆ ಗಂಡು ಮಗುವೂ ರೆ ಅದನ್ನು ಪೋಷಿಸುವುದೂ ಅವಳಿಗೆ ಜವಾ ರಿಯುತ ಕಾರ್ಯವಲ್ಲವೆ? ಮಗಳಿಗೆ ಎರೆದ ತಿಯಧಾರೆ ಮಗನ ಕಡೆಗೂ ಹರಿಯಲೇ ಕಷ್ಟೆ. ಹಿಂದೆ ಮಗಳಿಗೆ ಜನ್ಮ ನೀಡಿದಾಗ ಅತ್ತೆ ನೆಯವರ ಬಗ್ಗೆ ಅಳುಕಿದ ಮನ, ಮಗನನ್ನು ತ್ತಾಗ ಜನ್ಮಸಾರ್ಥಕ್ಯ ಹೊಂದಿದಂತೆ ಅವ ಲ್ಲಿ ಪರಿಪೂರ್ಣಭಾವ ಮೂಡುತ್ತದೆ. ಈ ಸಂಗತಿ ನ್ನು–

ಕಂದ ಹುಟ್ಟಿವಾಗ ಕುಂದ್ಯಾವಕ್ಕನ ಮಾರಿ
ಕಂದ ಚೆಂಡಾಡಿ ಬರುವಾಗ! ಅಮಾರಿ
ಕುಂದಲ್ಹರಳಾಗಿ ಹೊಳೆದಾವ

ಎಂಬ ಪದ್ಯ ಪರಿಚಯಿಸುತ್ತದೆ. ಇಂಥ ಅಮಿತ ಆನಂದದಿಂದಾಗಿ ಅವಳು–

ತೂಗು ತೊಟ್ಟಲಿಗೊಂದು ಪಾಗು ಪಟ್ಟಿಯ
ಹಾಸಿ
ಮಾಗಾಯಿ ಮಗನ ಮಲಗ್ಹಿಸಿ ಅವರಮ್ಮ
ಜೋಗುಳ ಹಾಡಿ ಹಿಗ್ಯಾಳ!

ಹೀಗೆ ಮಾತೃ ಹೃದಯ ಕಂದನಿಗೆ ಒಲಿದು ನಲಿಯುತ್ತದೆ. ಮಗು ಬೆಳೆದಂತೆ ಅದರ ಅಳು, ನಗು, ಹಠ, ರಂಪಾಟ ಎಲ್ಲವೂ ಅವಳಿಗೆ ಎದು ರಾದರೂ ಅವಳಿಗೇನೂ ಅದರ ಬಗ್ಗೆ ಬೇಸರವಿಲ್ಲ.

ಹಾಲ್ಬೇಡಿ ಅತ್ತಾನ, ಕೋಲ್ಬೇಡಿ ಕುಣಿದಾನ
ಮೊಸರ್ಬೇಡಿ ಕೆಸರಾ ತುಳಿದಾನ–ಕಂದಯ್ನ
ಕುಸುಲಾದ ಗೆಜ್ಜಿ ಕೆಸರಾದೊ

ಎಂದು ಅವಳು ತನ್ನ ಮಗನ ಬಗ್ಗೆ ಪ್ರೀತಿ ತುಂಬಿದ ಆಕ್ಷೇಪಣೆಯನ್ನು ಮಾಡುತ್ತಾಳೆ. ಒಂದು ವೇಳೆ ಈ ಮಗುವಿನ ಅಳು, ರಗಳೆ ಬೇರೆಯ ವರಿಗೆ ಬೇಸರ ತರಿಸಿದರೆ, ಅದಕ್ಕೆ ಅವರು ಅಸ ಮಾಧಾನ ತೋರಿದರೆ, ಅವಳು ಅವರನ್ನು ವಿಚಾ ಯಿಸಲೂ ಸಿದ್ಧ. ಏಕೆಂದರೆ ತನ್ನ ಮಗುವನ್ನು ಬೇರೊಬ್ಬರು ಬೇಸರಿಸುವುದು ಅವಳಿಗೆ ಸಹ್ಯ ವಾಗದು. ಅದಕ್ಕಾಗಿ ಅವಳು.

ಅತ್ತರೇ ಅಳಲವ್ವ ಈ ಕೂಸು ನನಗಿರಲಿ
ಕೆಟ್ಟರೇ ಕೆಡಲಿ ಮನಿಗೆಲಸ–ಕಂದ ನಂಥ
ಹತ್ತು ಮಕ್ಕಳಿರಲವ್ವ ಮನೆ ತುಂಬ

ಎಂದು ಸಮರ್ಥಿಸುವುದರೊಂದಿಗೆ ಸಂತೃಪ್ತಿ ಯನ್ನೂ, ಹೊಂದುತ್ತಾಳೆ.

ಮಗು ಎಂದ ಮೇಲೆ ಎದ್ದು, ಬಿದ್ದು, ಕೈಮೈ ಕೊಳೆಮಾಡಿಕೊಳ್ಳದೆ ಇರುತ್ತದೆಯೇ! ಅದಕ್ಕೂ ತಾಯಿ ಓಸರಿಸಳು. ಅವಳಿಗೆ ಮನೆಗೆಲಸದಲ್ಲಿ ಎಷ್ಟೇ ಆಯಾಸವಾಗಿದ್ದರೂ ಮಗುವಿನ ವಿಷಯಕ್ಕೆ ಅವಳಲ್ಲಿ ಬೇಸರಿಕೆ ಇಲ್ಲ. ಅದಕ್ಕೆ ಅವಳದೇ ಆದ ಅಭಿಪ್ರಾಯವೇ ಇದೆ.

ನನ್ನಯ್ಯನಂಥೋರು ಹನ್ನೆರಡು ಮಕ್ಕಳು
ಹೊನ್ನೇಯ ಮರದ ನೆರಳಲಿ ಆಡುವಾಗ
ಸಂನ್ಯಾಸಿ ಜಪವಾ ಮರೆತಾನು

ಎಂಬುದೇ ಅವಳ ನಿರ್ಧಾರ. ವಿರಾಗಿಯೇ ಮಗು ವಿನ ಆಟಪಾಟಕ್ಕೆ ಮರುಳಾಗಿ, ತನ್ನ ತಪೋಭಂಗ ವಾದರೂ ರೋಷಾವಿಷ್ಟನಾಗದೆ; ಜಪಮರೆತು ಆನಂದ ತುಂದಿಲನಾದನೆಂದರೆ; ಹೆತ್ತವರುಳಿಗೆ ತನ್ನ ಮಗುವಿನ ಬಗ್ಗೆ ಎಷ್ಟು ಪ್ರೀತಿ ಇರಬೇಡ, ಆದ್ದರಿಂದ ಅವಳು ಮಗುವಿನ ಅಳು–ನಗು ಎರಡ ರಲ್ಲೂ ಆನಂದ ಕಾಣುತ್ತಾಳೆಯೇ ಹೊ ಸ್ವಲ್ಪವೂ ಸಿಡುಕುವುದಿಲ್ಲ. ಆ ಅಳು–ನಗು ಡನ್ನೂ ಸುಂದರವಾದ ಉಪಮೆಯ ಮೂ ಚಿತ್ರಿಸಲೂ ಅವಳು ಬಲ್ಲಳು.

ಅಳುವ ಕಂದನ ತುಟಿಯು ಹವಳದ ಕುಡಿ ಹ
ಕುಡಿಹುಬ್ಬು ಬೇವಿನೆಸಳ್ಹಂಗ ಕಣ್ಣೋಟ
ಶಿವನ ಕೈಯಲಗು ಹೊಳೆದಂಗ–

ಎಂದು ಒಂದು ಕಡೆ ಹೇಳಿದರೆ

ಎಲ್ಲರ ಮಕ್ಕಳ್ಹಂಗೆ ಅಲ್ಲಕಣೆ ನನ್ನಯ್ಯ
ನಲ್ಲರಳು ಗಣ್ಣು ನಗೆಮುಖ ಕಾಮನ
ಬಿಲ್ಲು ಹೋಲ್ತಾವೆ ಕುಡಿ ಹುಬ್ಬು

ಎಂದು ಮತ್ತೊಂದೆಡೆ ಬೀಗುತ್ತಾಳೆ. ತನಗೆ ತಾಯ್ತನದ ಪಟ್ಟ ತಂದು ಕೊಟ್ಟ ವಿನ ಬಗೆಗೆ ಎಷ್ಟು ಪ್ರೀತಿ ಎಂದರೆ ಮೊದಲು ' ರಕೆ ಹೆಚ್ಚು ಪತಿ ಪುರುಷ' ಎನ್ನುತ್ತಿದ್ದವಳ ಮ ಈಗ ಸಂಪೂರ್ಣವಾಗಿ ಮಗುವಿನ ಕಡೆಗೇ ಯುತ್ತದೆ.

ತೋಳುದ್ದ ತಲೆದಿಂಬು ಮಾರುದ್ದ ಹಾಸಿ
ಮಾಣಿಕದಂಥ ಮಗ ಮುಂದ ಮಲಗಿ
ಮಾರಾಯ್ರು ಗೊಡವೆ ನನಗೇನ

ಎಂದು ವೈರಾಗ್ಯ ತಾಳುವಷ್ಟರ ದೃಢವಾಗಿದೆ ಅವಳ ಮನಸ್ಸು. ಅವನ ಕ ಕಲಾಪಗಳೇ ಅವಳ ಪರಮ ಕ ಇದರಿಂದಾಗಿ ಅವಳು ಹೇಳುತ್ತಾಳೆ–

ಅಡಿಬಾ ನನಕಂದ ಅಂಗಾಲ ತೊಳೆದೇ
ತೆಂಗೀನ ಕಾಯಿ ತಿಳಿನೀರು ತಕ್ಕೊಂಡು
ಬಂಗಾರ ಮೋರೆ ತೊಳೆದೇನು!

ಎಂದು ಅವಳ ಮಗು ಏನೆಲ್ಲಾ, ಮಾಡಿದರೂ ಅವಳಿಗೆ ಚಂದವೇ. ಹೀ ಮನ ಪೂರ್ವಕವಾಗಿ ಮಗನನ್ನು ಪೋಷಿಸುತ್ತಾಳೆ. ಮಗ ಪ್ರಾಪ್ತ ವಯ ತ್ತಾನೆ.

ಮಗಳಿಗೆ ಮದುವೆ ಮಾಡಿಕೊಟ್ಟು ಮಾಡಿ ಕೊಂಡಿದ್ದ ಒಡಲನ್ನು (ಉಡಿ ತುಂಬಿಕೊಳ್ಳುವ ಹಂಬಲ ಅವಳದು. ಆ ಮಗನಿಗೆ ಮದುವೆ ಮಾಡಿದರೆ, ಬರುವ ಮಗಳ ಸ್ಥಾನವನ್ನು ತುಂಬಿಯಾಳೆಂಬ ಯಿಂದ ಮಗನಿಗೆ ಹೆಣ್ಣು ನೋಡಿ, ಮದುವೆ ಮಾಡುತ್ತಾಳೆ.

ಮನೆಗೆ ಸೊಸೆಯನ್ನು ತಂದ ಸಡಗ ಮದಲ್ಲಿ ಕಾಲ ಉರುಳಿದ್ದೇ ತಿಳಿಯ ಹಾಗೆಯೇ ಮಗನಲ್ಲೂ ಸ್ವಲ್ಪ ಸ್ವಲ್ಪವ ಲಾವಣೆಯೂ ಗೋಚರಿಸಿದಾಗ್ಗ. ತಾ

ತಾನು ಏಕಾಂಗಿ ಎಂಬ ದುಃಖಕ್ಕೆ ಈಡಾಗುತ್ತಾಳೆ. ಯಾವ ಮಗನ ವಿಷಯವಾಗಿ ಅಭಿಮಾನದಿಂದ, ಹೆಮ್ಮೆಯಿಂದ, ತೃಪ್ತಿಯಿಂದ, ಸಂತೋಷದಿಂದ ಮಾತಾಡುತ್ತಿದ್ದಳೋ, ಈಗ ಅದೇ ಮಗನ ವಿಷಯ ಕೊರಗಾಗಿ ಅವಳ ಮನವನ್ನು ಕಾಡಲಾರಂಭಿಸಿದೆ. ಕಾರಣ ನಿಶ್ಚಿತವಾಗಿ ಮುಂದೆ ನಿಂತಿದೆ. ಅವಳ ಮನ ಚೀರಾಡುತ್ತಿದೆ–"ಸೊಸೆ ಬಂದು ವರುಷದಾಗ ನನ್ನ ಮಗ ಬ್ಯಾರೆಯಾದ" ಎಂದು ಅವಳ ಗಮನ ಈಗ ಸೊಸೆಯ ಕಡೆ ಹರಿಯುತ್ತದೆ. ಅವಳಾದರೂ ಸಾಮಾನ್ಯಳಲ್ಲ. ಬಹಳ ಹಮ್ಮು ಬಿಮ್ಮಿನವಳು ಎನಿಸುತ್ತದೆ ಅದನ್ನೇ ಅವಳು "ಅತ್ತೆ ಎಂಬ ಹಂಬಲಿಲ್ಲೇಕೆಗೆ ಬರಿಯ ಕಾಸಿನ ಕಿಮ್ಮತ್ತು" ಎಂದು ಹೇಳುತ್ತಾಳೆ. ಇಂಥವಳು ಅತ್ತೆಯನ್ನು ಗೌರವಾದರದಿಂದ ಕಾಣುವಳೆ? ಅವಳನ್ನು ತನ್ನ ಮೇಲಿರುವ ಒಂದು ಹೊರೆ ಎಂದು ಕಂಡು ತಿರಸ್ಕರಿಸಿದರೆ ಆ ತಾಯಿ ಮನಸ್ಸು ನೆಮ್ಮದಿಯಿಂದಿರಲೂ ಕೂಡ ಅವಕಾಶವಾಗದು. ಆದಕ್ಕಾಗಿ "ತುತ್ತು ಕೂಳಿಗೆ ಹಂಗಸಾಕಿಗೆ ಸಾಕಳೇವ್ವದ್ಯಾಂಗ ಹೊತ್ತಾ" ಎಂದು ವ್ಯಥಿತಳಾಗುತ್ತಾಳೆ. ಎಂಥ ವಿಚಿತ್ರಲೋಕವಿದು. ಹಿಂದೊಮ್ಮೆ ಬಂಜೆತನದ ತಾಪ ಹೊತ್ತಿದ್ದಾಗ "ಹಂಗೀನ ಬಾನ ಉಣಲಾರೆ" ಎಂದಿದ್ದ ಅದೇ ಬಾಯಿಂದ ಮಗನನ್ನು ಹೆತ್ತಮೇಲೂ 'ಸಾಕಳೆವ್ವದ್ಯಾಂಗ ಹೊತ್ತಾ' ಎಂಬ ಉದ್ಗಾರವೆದ್ದಿದೆ. ಕಾರಣ ಬೇರೆ ಬೇರೆಯಾದರೂ ಸ್ಥಿತಿ ಮಾತ್ರ ಒಂದೇ. ಹಾಗಾದರೆ ಆ ಹೃದಯವಾಗ ತೃಪ್ತಿ ಹೊಂದಿತ್ತು ಎಂಬ ಪ್ರಶ್ನೆ ಮೂಡುತ್ತದೆ. ಆ ತೃಪ್ತಿ ಮಗನ ಲಾಲನೆಯಿಂದ ಸಿಕ್ಕಿತ್ತು ಒಮ್ಮೆ.

ಬಾಳಿನಲ್ಲಿ ಅನೇಕ ಆಶೋತ್ತರಗಳನ್ನಿಟ್ಟುಕೊಂಡು, ಆಧ್ಯೇಯಗಳಿಗಾಗಿಯೇ ಬದುಕಿ, ಹೋರಾಡಿ ಹಣ್ಣಾದ ಆ ಹೆಣ್ಣು ಇಂದು ಮನವನ್ನೂ ಕೂಡ ಹಣ್ಣಾಗಿಸಿ ಕೊಳ್ಳುತ್ತಿದೆ.

ಮುಪ್ಪು ಮುದುಕಿ ಕಟ್ಟಿದ ಕನಸು ಏನಾಗಿ
ಹೋತಾ
ಸೊಸೆ ಬರುತಾಳೆ ಸುಖ ತರುತಾಳೆ

ಎಂಬ ಭರವಸೆಯು ಅಳಿದ
ಇದು'ಕನಸಾಗಿನ ಮಾತಾ ಗಾ
ಎಂಬ ನೈರಾಶ್ಯ ಅವಳಲ್ಲಿ ತುಂಬ
ಕುಂದಿ ಹೋಗಿದೆ. ಯಾವ ಮಗ

ಎಲ್ಲರ ಮಕ್ಕಳ್ಹಂಗೆ ಅಲ್ಲಕಣೆ
ನಲ್ಲರಳುಗಣ್ಣು ನಗೆಮುಖ

–ಎಂದು ಹಾಡಿ ಹೊಗಳುತ್ತಿದ್ದಳ
ಇಂದು "ಮಾರಿ ತಿರುವುತಾನ
ಬದುಕಿನಲ್ಲಿ ಇವ್ಯಾವ ಆಸೆಯೂ
ಅವಳ ಮನಸ್ಸು ಶೂನ್ಯವಾಗಿದೆ
ಗೊಂಡಿದೆ, ಹೃದಯ ಸ್ತಬ್ಧವ
ವುದು ಕೊನೆಯ ಗಳಿಗೆಯ
ತೂರುವ ಅಸಹಾಯಕತೆ ಒಂದ
ರುಣಿ, ಕೃತಘ್ನ, ನಿಷ್ಠುರಿ ಆಮ
ಸಿರಿವಂತಿಕೆಯಿರಲಿ ಮಾತಿನ ಸ
ಗಿದೆ. ತಲೆಗಿಡಬೇಕಾದ ಕಿಚ್ಚ
ಒಡಲಿಗೆ ಇಟ್ಟು ತಾಯನ್ನು
ಸುಡುತ್ತಿದ್ದಾನೆ. ಎಲ್ಲವೂ 'ಹಾವ
ಗಿದೆ.

ಈ ಮೂರುಗಳಿಗೆ ಬಾಳಿನಲ್ಲಿ
ಸುವುದನ್ನು ಬಿಟ್ಟು ಇಷ್ಟೆಲ್ಲಾ ಸಾ
ಹೊಟ್ಟೆ ಕಿಚ್ಚುಗಳಿಗೆ ಒಳಗಾಗಿ
ವುದಾದರೂ ಏನನ್ನು? ಒಂದ
ತನಗೂ ಇಂಥ ಸ್ಥಿತಿ ಬಳಬರ
ಇವರಿಗಿಲ್ಲವಲ್ಲ ಎಂದೆಲ್ಲಾ ಆಕೆಯ
ಏನೇ ಆಗಲಿ 'ಅತ್ತೆಗೊಂದು ಕಾ
ಕಾಲ' ಅಲ್ಲವೆ? ಹೆತ್ತೊಡಲ
ಸಂಕಟ ಅದು ಯಾವಾಗಿ ಯಾ
ಎನ್ನುವುದಾದರೆ ಅದಕ್ಕೆಲ್ಲಾ
ಆಧಾರ ಎನಿಸಿರ ಬೇಕು ಅವಳ
ಜಂಜಾಟಗಳನ್ನೂ ಪರಿಹರಿಸಿ
ನೆಮ್ಮದಿಗಳನ್ನು ದೊರೆಕಿಸು

ಮುಂದಿ ಮಂದೀಯೆಂದು

ಮಂದಿ ಬಿಟ್ಟಾರೋ ನಡು
ತಂದಿ ನನ ಕೈನ ಬಿಡಬ್ಯಾರ

ಎಂಬಂತೆ ಆ ಜೀವ ಪ
ಹೊಕ್ಕಿರುವುದು; ಏಕೆಂದರೆ ತನ
ಣರಾದವರಿಗೆ ಮುಂದೆ ಎಂದ
ಪ್ರತಿಫಲವನ್ನು ಉಣ್ಣಲೇಬೆ
ಬಂದೇ ಬರುವುದೆಂಬುದು
ಕಚ್ಚಿದ ನಾಯಿ ಸ್ವರ್ಗಕ್ಕಾದ
ನರಕಕ್ಕಾದರೂ ಹೋಗಲಿ,
ಕೊಂಡವರಿಗೇನು ಲಾಭ? ಅ
ಏನಾದರೂ ತಗ್ಗುವುದೇ
ಅವಳದು.



*Statement about ownership and other particulars about*

## SAPTHAGIRI
## (MONTHLY)
### FORM IV
( *See Rule* 8)

| | | | |
|---|---|---|---|
| 1 | Place of publication | ... | TIRUPATI. |
| 2 | Periodicity of its publication | ... | Monthly |
| 3 | Honorary Editor | ... | Sri S. Lakshminarayana, I.A.S. Executive Officer, T.T.D. |
| 4 | Printer's Name | ... | Sri M. Vijayakumar Reddy, L.P.T., |
| | Whether citizen of India | ... | Yes |
| | Address | .. | Manager, T.T.D. Printing Press, Tirupati. |
| 5 | Editor & Publisher's Name | ... | K. Subba Rao, M.A., |
| | Whether citizen of India | ... | Yes |
| | Address | | Editor, Sapthagiri, T.T.D. Journal, Tirupati. |
| 6 | Names and addresses of individuals who own the Newspaper and partners or shareholders holding more than one per cent of the total capital. | ... ... | Board of Trustees represented by the Executive Officer on behalf of T. T. D., Tirupati. |

*I, K. Subba Rao, hereby declare that the particulars given above are true to the best of my knowledge and belief.*

TIRUPATI,
*Date*: 28-2-1987.

**(*Sd.*) K. SUBBA RAO,**
*Signature of the Publisher.*

## ತಿರುಮಲೆಯಲ್ಲಿ ಗಣ್ಯರು

(ಲಂಕಾಮಂತ್ರಿ: ಶ್ರೀಲಂಕಾ ದೇಶದ ...ರಾಯ ಶಾಖಾಮಂತ್ರಿ ಶ್ರೀ ಜಯಸೂರ್ಯ ...ರಿ ತಿಂಗಳಿನಲ್ಲಿ ತಿರುಮಲೆಗೆ ಆಗಮಿಸಿ ಸ್ವಾಮಿ ... ಆರಾಧಿಸಿದರು. ವೈಕುಂಠಂ ಕ್ಯೂ ...ಪ್ಲೆಕ್ಸ್ ಮೂಲಕವಾಗಿ ನಡೆದು ಆಲಯವನ್ನು ... ಮಂತ್ರಿಯನ್ನು ತಿ. ತಿ. ದೇ. ಬೋರ್ಡ್ ...ಕ್ಷ ಶ್ರೀ ದೇವಿನೇನಿ ಸೀತಾರಾಮಯ್ಯ ಅವರು ...ತಿಸಿ, ದೇವಾಲಯದ ಇತಿಹಾಸ, ಪುರಾಣ ... ತಿ. ತಿ. ದೇ. ಗಳ ಹಲವಾರು ಯಾತ್ರಿಕ ...ಪಯೋಗಿ ಯೋಜನೆಗಳನ್ನು ವಿವರಿ...

...ಕೆ. ಕೆ. ತಿವಾರಿ: ಕೇಂದ್ರ ಮಂತ್ರಿ ಶ್ರೀ ... ತಿವಾರಿ ಅವರು ತಿರುಮಲೆಗೆ ಕುಟುಂಬ ...ರಾಗಿ ಜನವರಿ ತಿಂಗಳಲ್ಲಿ ಬಂದು ಸ್ವಾಮಿ... ಆರಾಧಿಸಿದರು. ಸುಪ್ರಭಾತ ಸೇವೆಯಲ್ಲಿ ...ವಹಿಸಿದ ಮಂತ್ರಿವರ್ಯರು ದೇವಾಲಯ ...ರಾಸವನ್ನು ಕೇಳಿ ತಿಳಿದುಕೊಂಡರು.

...ಶ್ರೀ ಪಿ. ವಿ. ನರಸಿಂಹರಾವ್: ಕೇಂದ್ರದ ...ನವ ಸಂಪನ್ಮೂಲ ಅಭಿವೃದ್ಧಿ ಶಾಖೆಯ ...ತ್ರಿ ಶ್ರೀ ಪಿ. ವಿ. ನರಸಿಂಹರಾವ್ ಅವರು ...ರಾಬಾದಿನಿಂದ ಕುಟುಂಬ ಸಹಿತರಾಗಿ ಬಂದು ...ಮಿಯನ್ನು ಸಂದರ್ಶಿಸಿ ಆರಾಧಿಸಿದರು.

## ...ಹೊಸ ಕಾಲೇಜುಗಳ ಆರಂಭ

...ತಿರುಮಲೆಯಲ್ಲಿ ಹೊಸದಾಗಿ ಕಟ್ಟಲಾದ ...ರು 215 ಕಾಟೇಜುಗಳ ಆರಂಭೋತ್ಸವ ... ತಿ. ತಿ. ದೇ. ಬೋರ್ಡ್ ಅಧ್ಯಕ್ಷ ಶ್ರೀ ...ವಿನೇನಿ ಸೀತಾರಾಮಯ್ಯ ಅವರು ನಡೆಸಿ ...ಟ್ಟರು. ಆಳ್ವಾರ್ ಕೆರೆಯ ಬಳಿಯ ಆಳ್ವಾರ್ ...ಟ್ಯಾಂಕ್ ಕಾಟೇಜುಗಳು (40) ರಾಮಬಗೀಚಾ ...ಧಿಗ್ರಹದ 150 ಕಾಟೇಜುಗಳು, ಮಾಧವ ...ಲದ 25 ಕಾಟೇಜುಗಳು ಆರಂಭ ...ಂದಿದವು. ಆರಂಭೋತ್ಸವ ಕಾರ್ಯಕ್ರಮ ... ಕಾರ್ಯನಿರ್ವಹಣಾಧಿಕಾರಿ ಶ್ರೀ ಎಸ್. ...ಕ್ಷ್ಮೀನಾರಾಯಣ, ಸಹಕಾರ್ಯ...ನಿರ್ವಹಣಾಧಿಕಾರಿ ಶ್ರೀ ವೈ. ಚಕ್ರಧರರಾವ್ ...ಾಲುಗೊಂಡಿದ್ದರು.

## ತಿರುಮಲೆಯಲ್ಲಿ
## ...ತಿ. ದೇ. ಸಹಕಾರೀ ಬ್ಯಾಂಕ್

ತಿ. ತಿ. ದೇ. ಉದ್ಯೋಗಿಗಳ ಸಹಕಾರೀ ...ಬ್ಯಾಂಕ್‌ನ ತಿರುಮಲೆ ಶಾಖೆಯನ್ನು ತಿರುಮಲೆಯ ...ಂಕುಮಿಟ್ಟ ಪ್ರಾಂತ್ಯದಲ್ಲಿ ತಿ.ತಿ.ದೇ. ಬೋರ್ಡ್ ...ಧ್ಯಕ್ಷ ಶ್ರೀ ದೇವಿನೇನಿ ಸೀತಾರಾಮಯ್ಯ ಆರಂಭಿಸಿದರು. ಪ್ರಾರಂಭೋತ್ಸವ ಕಾರ್ಯಕ್ರಮದಲ್ಲಿ ಮಾತನಾಡುತ್ತ ಬ್ಯಾಂಕು ಕಾರ್ಯದರ್ಶಿ ಶ್ರೀ ಮುನಿರತ್ನಂ ಪ್ರಸ್ತುತದಲ್ಲಿ ಮುವತ್ತು ಲಕ್ಷ ಷೇರು ಹಣವೂ, ಮೂವತ್ತು ಲಕ್ಷ ಠೇವಣಿ ಹಣವೂ ಇದ್ದು, ಒಂದು ಕೋಟಿಯವರೆಗೂ ಸಾಲ ನೀಡಿರುವುದಾಗಿ ತಿಳಿಸಿದರು.

## ಚಿತ್ತೂರು ಜಿಲ್ಲೆಯಲ್ಲಿ
## ತಿ.ತಿ.ದೇ. ಕಲ್ಯಾಣಮಂಟಪಗಳು

ಚಿತ್ತೂರು ಜಿಲ್ಲೆಯ ಪೀಲೇರು, ಮದನಪಲ್ಲಿಗಳಲ್ಲೂ ಶೀಘ್ರವಾಗಿ ತಿ. ತಿ. ದೇ. ಕಲ್ಯಾಣ ಮಂಟಪಗಳನ್ನು ನಿರ್ಮಿಸಲಿರುವುದಾಗಿ ಚಿತ್ತೂರಿನ ತಿ. ತಿ. ದೇ. ಕಲ್ಯಾಣ ಮಂಟಪಕ್ಕೆ ಶಂಕುಸ್ಥಾಪನೆ ಮಾಡುತ್ತ ತಿ. ತಿ. ದೇ. ಬೋರ್ಡ್ ಅಧ್ಯಕ್ಷ ಶ್ರೀ ಡಿ. ಸೀತಾರಾಮಯ್ಯ ತಿಳಿಸಿದರು.

ಹದಿನೈದು ಲಕ್ಷ ರೂಗಳ ಅಂದಾಜು ವೆಚ್ಚದಲ್ಲಿ ನಿರ್ಮಿತವಾಗುವ ಚಿತ್ತೂರು ಕಲ್ಯಾಣ ಮಂಟಪದಲ್ಲಿನ ಮೊದಲ ಅಂತಸ್ತಿನಲ್ಲಿ ಹಾಲು, ಕೋಣೆಗಳೂ, ಎರಡನೇ ಅಂತಸ್ತಿನಲ್ಲಿ ಸಭಾ ಭವನವೂ ಇರುತ್ತದೆ. ಸಭಾಭವನದಲ್ಲಿ ಧಾರ್ಮಿಕ ಸಾಂಸ್ಕೃತಿಕ ಕಾರ್ಯಕ್ರಮಗಳಿಗೆ ಮಾತ್ರ ಅನುಮತಿಯಿರುವುದು. ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಎಸ್. ಲಕ್ಷ್ಮೀನಾರಾಯಣ, ಬೋರ್ಡ್ ಸದಸ್ಯ ಶ್ರೀ ರಾಮಚಂದ್ರರಾಜು, ಜಿಲ್ಲಾಧಿಕಾರಿ ಶ್ರೀ ಸಿ. ಎಚ್. ವೆಂಕಟಪತಿರಾಜು, ಜಿಲ್ಲಾ ನ್ಯಾಯಾಧೀಶ ಶ್ರೀ ಅಯ್ಯಪುರೆಡ್ಡಿ ಅವರುಗಳು ಶಂಕು ಸ್ಥಾಪನೆಯಲ್ಲಿ ಹಾಜರಿದ್ದರು.

## ತಿರುಮಲೆಯಲ್ಲಿ
## ಹೊಸ ಸಮಾಚಾರಕೇಂದ್ರ

ತಿರುಮಲೆಯಲ್ಲಿ ಕಲ್ಯಾಣಕಟ್ಟ ಪ್ರಾಂತ್ಯದಲ್ಲಿ ತಿ. ತಿ. ದೇ. ಸಮಾಚಾರಕೇಂದ್ರ ಆರಂಭವಾಗಿದೆ. ಒಬ್ಬ ಗಾರ್ಡ್, ಒಬ್ಬ ಸಮಾಚಾರ ಮಾರ್ಗದರ್ಶಿ, ಜೊತೆಗೇ ಒಬ್ಬ ಪೋಲೀಸ್ ಸಹ ಇರುವ ಈ ಸಮಾಚಾರಕೇಂದ್ರವನ್ನು ತಿ. ತಿ. ದೇ. ಸಹಕಾರ್ಯನಿರ್ವಹಣಾಧಿಕಾರಿ ಶ್ರೀ ವೈ. ಚಕ್ರಧರರಾವ್ ಅವರು ಆರಂಭಿಸಿದರು. ದೇವಾಲಯದ ಪೂಜಾವಿಧಿಗಳ ವಿವರಗಳನ್ನು ತಿಳಿಸುವ ವಿವಿಧಭಾಷಾ ಕರಪತ್ರಗಳನ್ನು ಹಂಚುವಿಕೆ, ಯಾತ್ರಿಕರಿಗೆ ಸರಿಯಾದ ಸೂಚನೆಗಳನ್ನು ನೀಡುವಿಕೆ ಈ ಕೇಂದ್ರದ ಉದ್ದೇಶವೆಂದು ತಿ. ತಿ. ದೇ. ಸಾರ್ವಜನಿಕ ಸಂಪರ್ಕಾಧಿಕಾರಿ ಡಾ॥ ರಾವುಲ ಸೂರ್ಯನಾರಾಯಣಮೂರ್ತಿ ಅವರು ತಿಳಿಸಿದರು.

## ರಾಜಲಕ್ಷ್ಮೀದೇವಿ ಅವರಿಗೆ
## ಯೋಗಶಿರೋಮಣಿ ಬಿರುದ

ತಿರುಪತಿಯ ಎಸ್. ವಿ. ಯೋಗ, ಅನುವಿಜ್ಞಾನ ಶಾಸ್ತ್ರಗಳ ಸಂಸ್ಥೆಯ ಪ್ರಾಂಶುಪಾಲೆ ಶ್ರೀಮತಿ ಎಸ್. ಆರ್. ವೈ. ರಾಜಲಕ್ಷ್ಮೀ... ಯವರಿಗೆ 'ಯೋಗಶಿರೋಮಣಿ' ಬಿರುದನ್ನು ಈಚೆಗೆ ದೆಹಲಿಯಲ್ಲಿ ನಡೆದ ...ಸದಸ್ಸಿನಲ್ಲಿ ರಾಷ್ಟ್ರಪತಿ ಶ್ರೀ ಜೈಲ್‌ಸಿ... ನೀಡಿದರು. ಯೋಗದ ಕ್ಷೇತ್ರದಲ್ಲಿ ನಡೆಸಿದ ಸೇವೆಗಾಗಿ ಪರಿಶೋಧನೆಗಳಿಗಾಗಿ ಅವರಿ... ಬಿರುದು ಸಂದಿದೆ.

ರಾಷ್ಟ್ರೀಯ ಸ್ಥಾಯಿಯಲ್ಲಿ ಒಂದು ... ವಿಶ್ವವಿದ್ಯಾಲಯವನ್ನು ಕೇಂದ್ರಸರ್ಕಾರ ... ಮಾಡಬೇಕೆಂದು ಕೋರಲು ಯೋಗಸದ... ತೀರ್ಮಾನ ಮಾಡಲಾಯಿತು.

## ಸಂಸ್ಕೃತ ವಿದ್ಯಾಪೀಠದ
## ರಜತೋತ್ಸವ

ತಿ. ತಿ. ದೇ. ಗಳ ಸಹಕಾರದಿಂದ 19... ಆರಂಭವಾದ ಕೇಂದ್ರೀಯ ಸಂಸ್ಕೃತ ವಿದ... 25 ವರ್ಷಗಳ ಸಂಸ್ಕೃತ ಸೇವೆಯಲ್ಲಿ ಕಾರ್ಯನಿರ್ವಹಿಸಿ ಮುಂದುವರಿ... ಹೊತ್ತಿನಲ್ಲಿ, ಕೇಂದ್ರ ಮಾನವ ಸಂ... ಅಭಿವೃದ್ಧಿ ಶಾಖಾಮಂತ್ರಿ, ವಿದ್ವಾಂಸ ಶ್ರೀ... ನರಸಿಂಹರಾವ್ ಅವರು ಅದರ ರಜತ... ಸ್ನಾತಕೋತ್ಸವದಲ್ಲಿ ಭಾಗವಹಿಸಿ ... ನಾಡುತ್ತ, ಈ ಪೀಠವನ್ನು ವಿಶ್ವವಿದ್ಯಾ... ಮಟ್ಟಕ್ಕೇರಿಸಲಾಗಿದೆಯೆಂದು ತಿಳಿಸಿದರು.

ತಿರುಪತಿ ಹಾಗೂ ದೆಹಲಿಗಳ ಸಂಸ್ಕೃ... ಪೀಠಗಳು ವಿಶ್ವವಿದ್ಯಾಲಯ ಸ್ಥಾಯಿಗೇ...ರಿಂದ ಈಗ ದೇಶದಲ್ಲಿ ಒಟ್ಟು ಐದು ಸಂಸ್... ವಿದ್ಯಾಲಯಗಳಾದಂತಾಗಿ ದಕ್ಷಿಣ ಭ... ತಿರುಪತಿಯದೇ ಮೊದಲ ಸಂಸ್ಕೃತ... ವಿದ್ಯಾಲಯವಾಗಿದೆ. ಬಿಹಾರದ ದ... ಒರಿಸ್ಸಾದ ಪೂರಿ, ಉತ್ತರಪ್ರದೇಶದ ವ...ಗಳಲ್ಲಿ ಉಳಿದ ಮೂರು ವಿಶ್ವವಿದ್ಯಾಲಯ...

1962 ರ ಆಗಸ್ಟ್ 13 ರಂದು 3... ವಿದ್ಯಾರ್ಥಿಗಳು, ಇಬ್ಬರು ಅಧ್ಯಾ... ತಿ. ತಿ. ದೇ. ಪ್ರೆಸ್ ಕಾಂಪೌಂಡ್‌ನಲ್ಲಿ

ವಾದ ಕೇಂದ್ರೀಯ ಸಂಸ್ಕೃತ ವಿದ್ಯಾಪೀಠ ಪ್ರಸ್ತುತ 192 ಮಂದಿ ವಿದ್ಯಾರ್ಥಿಗಳು 19 ಮಂದಿ ಅಧ್ಯಾಪಕರಿಂದ ಕೂಡಿದೆ. ಮೊದಲಿಗೆ ಶಿಕ್ಷಾ ಶಾಸ್ತ್ರ ಕೋರ್ಸ್ (ಬಿ. ಎಡ್‌ಗೆ ಸಮ) ಅನ್ನೂ, ನಂತರ 1970 ರಲ್ಲಿ ಪ್ರಾಕ್ ಶಾಸ್ತ್ರ, (ಪಿ. ಯು. ಸಿ.) ಶಾಸ್ತ್ರೀ (ಬಿ. ಎ.) 1973 ರಲ್ಲಿ ಆಚಾರ್ಯ (ಎಂ. ಎ.) ಕೋರ್ಸುಗಳನ್ನೂ ನೀಡಲಾರಂಭಿಸಲಾಯಿತು. ನಂತರ ವಿದ್ಯಾವಾರಿಧಿ (ಪಿ. ಎಚ್. ಡಿ.), ಶಾಸ್ತ್ರ ಚೂಡಾಮಣಿ (ಎಂ. ಫಿಲ್) ಶಿಕ್ಷಾಚಾರ್ಯ (ಎಂ. ಎಡ್) ಕೋರ್ಸುಗಳನ್ನು ಆರಂಭಿಸಲಾಯಿತು. ಈಗ 147 ಮಂದಿ ಪರಿಶೋಧನೆಯಲ್ಲಿ ತೊಡಗಿದ್ದಾರೆ. ಒಟ್ಟು 44 ಗ್ರಂಥಗಳನ್ನೂ ಹೊರತಗಲಾಗಿದೆ ತಿ. ತಿ. ದೇ. ಗಳ ನೆರವಿನಿಂದ ಟೇಪ್‌ರೆಕಾರ್ಡ್ ವಿಭಾಗವನ್ನೂ ಆರಂಭಿಸಿದ್ದು ಸಾಮ, ಅಥರ್ವಣ, ಋಕ್ ವೇದಗಳನ್ನೂ ಕೇರಳ ಯಜುರ್ವೇದವನ್ನೂ ರೆಕಾರ್ಡ್ ಮಾಡಲಾಗಿದೆ. ಸಂಸ್ಕೃತವನ್ನು ಜನಪ್ರಿಯಗೊಳಿಸಲು 'ಹತ್ತು ದಿನಗಳ ಸಂಸ್ಕೃತ' ಶಿಬಿರಗಳನ್ನೂ ನಡೆಸಲಾಗುತ್ತಿದೆ.

ರಜತೋತ್ಸವ ಸಮಯದಲ್ಲಿ ಪೀಠದ ಮೊದಲ ನಿರ್ದೇಶಕ ಡಾ॥ ಬಿ. ಆರ್. ಎ. ಶರ್ಮ ಅವರನ್ನು ಶ್ರೀ ಪಿ. ವಿ. ನರಸಿಂಹರಾವ್ ಅವರು ಸನ್ಮಾನಿಸಿದರು.

## ವೇದ ವಿದ್ಯಾಸಂಸ್ಥಾನ

ಪ್ರಾಚೀನ ಸಂಪ್ರದಾಯಕ ಮೌಲ್ಯಗಳನ್ನು ಒಳಗೊಂಡ ವೇದಗಳನ್ನು ಪ್ರಚಾರಗೊಳಿಸುವ ಉದ್ದೇಶ ಹೊಂದಿದ ವೇದ ವಿದ್ಯಾಸಂಸ್ಥಾನವನ್ನು ಏರ್ಪಾಡು ಮಾಡಲಿರುವುದಾಗಿ ಮಾನವ ಸಂಪನ್ಮೂಲ ಅಭಿವೃದ್ಧಿ ಶಾಖಾಮಂತ್ರಿ ಶ್ರೀ ನರಸಿಂಹರಾವ್ ತಿಳಿಸಿದರು. ಸ್ವಚ್ಛಂದ ಸಂಸ್ಥೆಯಾಗಿ ನೊಂದಾಯಿಸಲ್ಪಟ್ಟು ಈ ಸಂಸ್ಥೆಗೆ ಪ್ರಸ್ತುತ ಆರ್ಥಿಕ ವತ್ಸರದಲ್ಲಿ 31 ಲಕ್ಷರೂಗಳ ದೇಣಿಗೆ ನೀಡಲಾಗಿದೆಯೆಂದೂ ತಿಳಿಸುತ್ತ, ಈ ಸಂಸ್ಥೆ ವೇದ ವಿದ್ಯಾಶೋಧನೆ ಪ್ರಚಾರಗಳೊಂದಿಗೆ ಉಚಿತ ಸಂಶೋಧನೆಗಳನ್ನೂ ಮಾಡುವುದು ಎಂದು ಹೇಳಿದರು. ಶ್ರೀಯುತರು ಕೇಂದ್ರೀಯ ಸಂಸ್ಕೃತ ವಿದ್ಯಾಪೀಠದ ರಜತೋತ್ಸವದಲ್ಲಿ ಮಾತನಾಡುತ್ತಿದ್ದರು.

## ಮಂಡ್ಯದಲ್ಲಿ ಪುರಂದರದಾಸ ಆರಾಧನೆ

ದಿನಾಂಕ 27-1-87 ರಿಂದ 31-1-87 ರ ವರೆಗೆ ಮಂಡ್ಯದಲ್ಲಿನ ಶ್ರೀ ಲಕ್ಷ್ಮೀಜನಾರ್ದನ ಸ್ವಾಮಿ ಕಲ್ಯಾಣಮಂಟಪದಲ್ಲಿ ಮಂಡ್ಯದ ಶ್ರೀ ಪುರಂದರದಾಸ ಆರಾಧನಾಸಮಿತಿ, ಅಖಿಲಭಾರತ ಹರಿದಾಸ ಸಮ್ಮೇಳನ ಸಮಿತಿ, ತಿ. ತಿ. ದೇ.ಗಳ ದಾಸಸಾಹಿತ್ಯ ಪ್ರಾಜೆಕ್ಟ್‌ಗಳ ಸಂಯುಕ್ತ ಆಶ್ರಯದಲ್ಲಿ ಅಖಿಲಭಾರತ ಹರಿದಾಸ ಸಮ್ಮೇಳನವೂ, ಶ್ರೀ ಪುರಂದರದಾಸ ಆರಾಧನಾಮಹೋತ್ಸವವೂ ಯಶಸ್ವಿಯಾಗಿ ನಡೆದವು.

27 ರಂದು ಮಧ್ಯಾಹ್ನ 3 ಗಂಟೆಗೆ ಅಪಾರ ಜನಸಂದಣಿಯೊಡನೆ ಮಂಡ್ಯದ ನಂದಾ ಚಿತ್ರ ಮಂದಿರದ ಬಳಿಯಿಂದ ಆರಂಭವಾದ ತಿರುಪತಿ ತಿಮ್ಮಪ್ಪನ ಭವ್ಯ ಮೆರವಣಿಗೆ ಹಲವಾರು ಸಮೂಹ ಭಜನಗೋಷ್ಠಿಗಳಿಂದಲೂ ಮಂಗಳವಾದ್ಯಗಳಿಂದಲೂ ಗೋವಿಂದ ನಾಮಸ್ಮರಣೆಯಿಂದಲೂ ಶ್ರೀ ಲಕ್ಷ್ಮೀಜನಾರ್ದನಸ್ವಾಮಿ ಕಲ್ಯಾಣ ಮಂಟಪಕ್ಕೆ ಆಗಮಿಸಿತು. ಧರ್ಮಸ್ಥಳದ ಧರ್ಮಾಧಿಕಾರಿ ಶ್ರೀ ವೀರೇಂದ್ರ ಹೆಗ್ಗಡೆಯವರು ದಾಸಪರಂಪರಾಧ್ವಜದ ಆರೋಹಣ ಮಾಡಿಸಿದರು. ಉದ್ಘಾಟನೆಯನ್ನು ಘೋಷಿಸಿದರು. ವ್ಯಾಸರಾಜ ಮಠದ ಶ್ರೀ ಶ್ರೀ ವಿದ್ಯಾಪಯೋನಿಧಿ ತೀರ್ಥರು ಸಮ್ಮೇಳನ ಆರಾಧನೆಯನ್ನು ಉದ್ಘಾಟಿಸಿದರು, ಧರ್ಮಾಧಿಕಾರಿಗಳು ತತ್ಸಂದರ್ಭದಲ್ಲಿ ತಿ. ತಿ. ದೇ ದಾಸಸಾಹಿತ್ಯ ಪ್ರಾಜೆಕ್ಟ್ ಏರ್ಪಡಿಸಿದ್ದ ದಾಸಸಾಹಿತ್ಯ ವಸ್ತುಪ್ರದರ್ಶನವನ್ನೂ ಶ್ರೀ

ಲಕ್ಷ್ಮೀಜನಾರ್ದನ ಸ್ವಾಮಿ
ಪ್ರೌಢಶಾಲೆಯ ಆವರಣದಲ್ಲಿ ಉ
ನಂತರ ನಡೆದ ಸಭೆಯಲ್ಲಿ ಈರ್ವ
ಆಶೀರ್ವಚನ ನೀಡುತ್ತ
ಪ್ರಾಜೆಕ್ಟ್‌ನ ಮೂರು ಪುಸ್ತಕಗ
ಮಾಡಿದರು. (ಭಕ್ತ ಪುರಂದರದ
ಕನ್ನಡ – ಶ್ರೀ ಕೆ. ಅಪ್ಪಣ್ಣಾಚಾ
ಅನುವಾದ – ಶ್ರೀ ಸುದರ್ಶನ ಭ
ಶ್ರೀ ಪ್ರಸನ್ನ ವೆಂಕಟದಾಸು ಕ
ಅನುವಾದ – ಶ್ರೀ ವಿ. ಸೂಯ
ರಾವ್.) ದಾಸಸಾಹಿತ್ಯ
ವಿಶೇಷಾಧಿಕಾರಿ ಶ್ರೀ ಕೆ. ಅಪ್ಪ
ಸಮ್ಮೇಳನದ ಸಂಸ್ಮರಣ ಸಂಚಿಕೆ
ಮಾಡಿದರು.

ದಿನವೂ ಬೆಳಗ್ಗೆ ಸಂಜೆಗಳಲ್ಲಿ
ಸಂಗೀತ, ಭಜನಗೋಷ್ಠಿ, ಹರಿಕ
ಡಾಗಿದ್ದವು. ಶ್ರೀ ಖಗವರಧ್ವಜ
ಶ್ರೀ ಪುಷ್ಕರ ಪ್ರಸಾದ್, ಶ್ರೀ
ಪ್ರಭಂಜನ, ಪ್ರೊ॥ ಭಾರದ್ವಾಜ,
ವಾಯಿಕರ ಆಚಾರ್ಯ
ಉಪನ್ಯಾಸಗಳನ್ನು ನೀಡಿ ; ಹರಿ
ಮಹತ್ವವನ್ನೂ, ಹಿರಿಮೆಯನ್ನು
ಶ್ರೀಮತಿ ಪಂಕಜಾ ರಾಮಚಂದ್ರ
ರಾಮಚಂದ್ರ, ಶ್ರೀಮತಿ
ಮೊದಲಾದವರುಗಳ ಸಂಗೀತ ಸ
ಕೀರ್ತನ ಸೌರಭವನ್ನು ಹರಡಿದ
ಗೋಡುದಾಸರು, ಶ್ರೀ ಗುರು
ಶಿಷ್ಯವೃಂದ, ವಿದ್ಯಾಗಣಪತಿ
ಶಾಲೆಯ ವಿದ್ಯಾರ್ಥಿ ವೃಂದ
ಭಜನ ಗೋಷ್ಠಿಗಳು ನಡೆದವು.
ದಾಸರು, ಶ್ರೀನಾಗರಾಜದಾ
ಗಳು ನಡೆದವು.

ತಿ. ತಿ. ದೇ. ಗಳ ವತಿಯಿಂ
ವೇಣು ಗೋಪಾಲದಾಸರಿಗೂ,
ವಿಠಲ ದಾಸರಿಗೂ ಸನ್ಮಾನ
ಯರು ದಾಸಸಾಹಿತ್ಯ ಪ್ರಾಜೆ
ಕಾರಿ ಶ್ರೀ ಕೆ. ಅಪ್ಪಣ್ಣಾಚಾಯ
ಸಾಹಿತ್ಯ ಪ್ರಾಜೆಕ್ಟ್ ಸಲಹಾಸ
ಅರಳುಮಲ್ಲಿಗೆ ಪಾರ್ಥಸ
ಸನ್ಮಾನಿಸಿದರು.

ಪೇಜಾವರ ಮಠದ ಶ್ರೀ ಶ್ರೀ
ಆಶೀರ್ವಚನ ದಿಂದ ಸಮ್ಮೇ
ಸಮಾರೋಪ ಹೊಂದಿದವು.

ಓದುಗರಿಗೆ, ಏಜಂಟರಿಗೆ
ಜಾಹೀರಾತುದಾರಿಗೆ
ಪ್ರಭವನಾಮ ಸಂವತ್ಸರದ
ಹಾರ್ದಿಕ ಶುಭಾಶಯಗಳು
—ಸಪ್ತಗಿರಿ

# ಆಡಳಿತ ನಿರ್ವಾಹಕ ಮಂಡಳಿಯ ತೀರ್ಮಾನಗಳು

ಪತಿಯ ಅಲಿಪಿರಿಯ ಬಳಿ ನಾಲ್ಕು ಕೋಟಿ ವೆಚ್ಚದಲ್ಲಿ ಏಳು ಅಂತಸ್ತಿನ ಸತ್ರವನ್ನು ಲಾಗುವುದು.

ತಿ. ದೇ ಬೋರ್ಡ್ ಅಧ್ಯಕ್ಷ ಶ್ರೀ ಡಿ. ರಾಮಯ್ಯ ಅವರ ಅಧ್ಯಕ್ಷತೆಯಲ್ಲಿ ಫೆಬ್ರ ರಂದು ಹೈದರಾಬಾದಿನಲ್ಲಿ ನಡೆದ ತಿ. ತಿ. ಡಳಿತ ನಿರ್ವಾಹಕ ಮಂಡಳಿಯ ಸಭೆಯಲ್ಲಿ ನಿರ್ಣಯವನ್ನು ಕೈಗೊಂಡಿದ್ದು, ಇದರ ತಿರುಪತಿಗೆ ದೂರದಿಂದ ಬರುವ ಬಸ್‌ಗ ಅಲಿಪಿರಿಯತ್ತ ತಿರುಗಿಸಿ, ಅಲ್ಲಿ ಬೆಟ್ಟದ ನಲ್ಲಿ ಯಾತ್ರಿಕರಿಗೆ ವಸತಿ, ಊಟೋಪ ಸೌಲಭ್ಯ, ವಿಚಾರಣಾ ಕಾರ್ಯಾಲಯ ಕ್ಯಗಳನ್ನು ಕಲ್ಪಿಸುವುದಾಗಿದೆ.

* * * *

ುಮಲೆಯಲ್ಲಿನ ಮತ್ತೂ ನೂರು ಕಾಟೇಜು ಮೇಲೆ ಎರಡನೆ ಅಂತಸ್ತಿನ ವಸತಿ ಸೌಕರ್ಯ 1 6 ಕೋಟಿರೂಗಳ ವೆಚ್ಚದಲ್ಲಿ ನಿರ್ಮಿ ತೀರ್ಮಾನಿಸಲಾಗಿದೆ. ಮೊದಲ ಹಂತದ ತ್ತು ಕಾಟೇಜುಗಳ ಮೇಲಂತಸ್ತು ಕೆಲಸ ಮುಗಿದಿದೆ ಮತ್ತು ಐವತ್ತು ಕಾಟೇಜುಗಳ ಮೇಲಂತಸ್ತು ನಿರ್ಮಾಣ ತ್ವರಿತ ಗತಿಯಲ್ಲಿ ನಡೆ ದಿದೆ ಎಂಬುದನ್ನು ಇಲ್ಲಿ ನೆನೆಯಬಹುದು. ಈಗ ಯಾತ್ರಿಕರಿಗೆಂದು 2158 ಬಾಡಿಗೆ ಕೋಣೆಗಳೂ 622 ಉಚಿತ ಕೋಣೆಗಳೂ ವಸತಿಗಿವೆ.

* * * *

ಇನ್ನೊಂದು ನಿರ್ಣಯದಂತೆ ಶ್ರೀನಿವಾಸ ಮಂಗಾಪುರ ತಿರುಪತಿಗಳ ನಡುವಣ ಹಳೆಯ ನೀರಿನ ಕೊಳವೆ ಸಾಲನ್ನು, ಕಲ್ಯಾಣಿ ಅಣೆಕಟ್ಟೆ ಯಿಂದ ಶ್ರೀನಿವಾಸ ಮಂಗಾಪುರ ನೀರು ಸರಬ ರಾಜು ಕೇಂದ್ರಕ್ಕೆ 7. ಕಿ. ಮೀ ದೂರದ ಹೊಸ ಕೊಳವೆ ಸಾಲನ್ನು ಜೋಡಿಸುವುದರಿಂದ ಬಳಸ ಲಾಗುವುದು. ಈ ಯೋಜನೆಯಂತೆ ಕಲ್ಯಾಣಿ ಜಲಾಶಯದಿಂದ ಈಗ ತಿರುಪತಿಗೆ ಬರುತ್ತಿರುವ 35 ಲಕ್ಷ ಗ್ಯಾಲನ್ ದಿನಂಪ್ರತಿ ನೀರಿನ ಜೊತೆಗೆ ದಿನಂಪ್ರತಿ 10 ಲಕ್ಷ ಗ್ಯಾಲನ್ ಹೆಚ್ಚು ನೀರನ್ನು ನೀಡಬಹುದಾಗಿದೆ

* * * *

ತಿರುಮಲೆಯಲ್ಲಿ ನೀರಿನ ನಿರಂತರ ಸರಬರಾಜಿ ಗಾಗಿ, ಪಾಪನಾಶನಂ ನಿಂದ ತಿರುಮಲೆಯ ಜಲಾ ಶಯದ ವರೆಗೆ ಹೊಸ ಹೆಚ್ಚಿನ ಕೊಳವೆ ಸಾಲ 60 ಲಕ್ಷರೂಗಳ ವೆಚ್ಚದಲ್ಲಿ ಹಾಕಲಾಗುವು ಅಳ್ವಾರ್ ಟ್ಯಾಂಕ್ ಕಾಟೇಜುಗಳ ಬಳಿ ಕಾಂಪ್ಲೆಕ್ಸ್ ಹತ್ತಿರ ಹಾಗೂ ಕಲ್ಯಾಣಕಟ್ಟೆ ಬಳಿ ಎರಡು ಶಿಲಾ ತೋರಣಗಳನ್ನು ನಿರ್ಮಿಸ ಗುವುದು.

* * * *

ತಿ. ತಿ. ದೇ ಉದ್ಯೋಗಿಗಳಿಗಾಗಿ 10 ಫ್ಲಾಟಗಳನ್ನು ನಿರ್ಮಿಸಿ ದೀರ್ಘಕಾಲಿಕ ಗುತ್ತಿ ನೀಡಬೇಕೆಂದು ತೀರ್ಮಾನಿಸಲಾಯಿತು. ತಿ. ದೇ. ಇದಕ್ಕಾಗಿ ಜಮೀನನ್ನೂ, ಜೀವವಿ ನಿಗಮ ಈ ಯೋಜನೆಗೆ ಸಾಲವನ್ನು ನೀಡುತ್ತ

* * * *

ದೇವಾದಾಯ ಶಾಖಾ ಕಮೀಷನರ್ ಶ್ರೀ ಕೆ. ಆರ್. ವಿನಾಯಕ್, ತಿ. ತಿ. ದೇ. ಕಾ ನಿರ್ವಹಣಾಧಿಕಾರಿ ಶ್ರೀ ಎಸ್. ಲಕ್ಷ್ಮೀನ ಯಣ, ಮಂಡಳಿಯ ಸದಸ್ಯರು ಶ್ರೀ ಸಿ. ಅ ರಾವ್ (ಎಂ. ಎಲ್. ಎ.) ಶ್ರೀ ಎಸ್. ಸ ರಾಯಣ (ಎಂ. ಎಲ್. ಎ.) ಹಾಜರಿದ್ದರು.

* * * *

---


**ಸಂದರ್ಶಿಸಿ** **ಆನಂದಿಸಿ**

## ಶ್ರೀ ಕೋದಂಡರಾಮಸ್ವಾಮಿ ದೇವಾಲಯ,

## ತಿರುಪತಿ

### ವಾರ್ಷಿಕ ಬ್ರಹ್ಮೋತ್ಸವ

**ದಿನಾಂಕ 26-3-87 ರಿಂದ 4-4-87 ರ ವರೆಗೆ**

| | | |
|---|---|---|
| 27-3-87 | ಶುಕ್ರವಾರ | ಧ್ವಜಾರೋಹಣ |
| 31-3-87 | ಮಂಗಳವಾರ | ಗರುಡೋತ್ಸವ |
| 3-4-87 | ಶುಕ್ರವಾರ | ರಥೋತ್ಸವ |
| 4-4-87 | ಶನಿವಾರ | ಧ್ವಜಾವರೋಹಣ |

ಶ್ರೀ ಕೋದಂಡ ರಾಮಸ್ವಾಮಿ ದೇವಾಲಯವು ತಿರುಪತಿಯ ಬಸ್‌ನಿಲ್ದಾಣ, ರೈಲ್ವೆ ನಿಲ್ದಾಣ, ಶ್ರೀ ಗೋವಿಂದ ರಾಜಸ್ವಾಮಿ ದೇವಾಲಯಗಳಿಂದ ಅಲಿಪಿರಿಗೆ ಹೋಗುವ ದಾರಿಯಲ್ಲಿದೆ. ಹತ್ತು ನಿಮಿಷದ ಕಾಲುನಡಿಗೆಯ ಹಾದಿ. ಊರ ಮಧ್ಯದಲ್ಲಿರುವ ಈ ದೇವಾಲಯದಲ್ಲಿ ಬ್ರಹ್ಮೋತ್ಸವ ಕಾಲದಲ್ಲಿ ದಿನವೂ ಬೆಳಗ್ಗೆ ಸಂಜೆಗಳಲ್ಲಿ ವಾಹನ ಸೇವೆಗಳೂ, ಸಂಗೀತ ಹರಿಕಥೆ ಮುಂತಾದ ಸಾಂಸ್ಕೃತಿಕ ಕಾರ್ಯಕ್ರಮಗಳೂ ಇರುತ್ತವೆ. ಹೆಚ್ಚಿನ ವಿವರಗಳಿಗೆ ತಿ.ತಿ.ದೇ. ವಿಚಾರಣಾ ಕಚೇರಿ ಯಲ್ಲಿ ವಿಚಾರಿಸಿ.

**ತಿ.ತಿ.ದೇ.**

ನೀವೂ ಬನ್ನಿ ನಿಮ್ಮ ವರನ್ನೂ ಕರೆತನ್ನಿ.


---

ಮುಂದಿನ ಸಂಚಿಕೆಯಲ್ಲಿ .... .... ....

## ಸಪ್ತಗಿರಿ. — ಏಪ್ರಿಲ್ 1987

ರಾಮಾಯಣ ವಿಶೇಷ ಸಂಚಿಕೆ

**ಆದಿಕಾವ್ಯದಲ್ಲಿ ಪಕ್ಷಿಗಳು** — ವಿದ್ವಾನ್ ಬ. ನ. ಗುಂಡೂರಾವ್

**ಕುವೆಂಪು ಚಿತ್ರಿಸಿರುವ ಮಂಡೋದರಿ** — ಸುಮನಾಬದರೀನಾಥ್

**ಹನುಮದ್ರಾಮಾಯಣ** — ಪು. ಶ್ರೀನಿವಾಸಭಟ್ಟ

**ಕನ್ನಡ ಜನಪದ ಕಾವ್ಯದಲ್ಲಿ ಸೀತೆ** — ಕೆ. ಜಗನ್ನಾಥಶಾಸ್ತ್ರೀ

**ರಾಮಾಯಣದ ಸಂಸ್ಕೃತಿ** — ಡಿ. ಕೃಷ್ಣೈಂಗಾರ್

ಧಾರಾವಾಹಿ : ಗೋದಾದೇವೀ ಕೃತ ತಿರುಪ್ಪಾವೈನ ಸಚಿತ್ರ ವಿವರಣೆ.

**ಜೊತೆಗೇ ಕಿಶೋರ ಜಗತ್, ಗೃಹಲಕ್ಷ್ಮಿ, ಇತ್ಯಾದಿ ಸ್ಥಿರ ಶೀರ್ಷಿಕೆಗಳು.**

**ನಿಮ್ಮ ಪ್ರತಿಯನ್ನು ಕಾಯ್ದಿರಿಸಿ.** ಬೆಲೆ: ರೂ. 1–00 ಮಾತ್ರ

ವಿಶೇಷ ಸೂಚನೆ: ಹೊಸದಾಗಿ ಚಂದಾದಾರರಾಗಬಯಸುವವರು ಕನಿಷ್ಠ ಒಂದು ವರ್ಷದ ಚಂದಾ ಹಣವನ್ನು ಕಳುಹಿಸಬೇಕು. ಅದಕ್ಕಿಂತಲೂ ಕಡಿಮೆ ಮೊತ್ತವನ್ನು ಸ್ವೀಕರಿಸಲಾಗುವುದಿಲ್ಲ. ವಾರ್ಷಿಕ ಚಂದಾ ರೂ. 12–00 ಮಾತ್ರ. ಹಿಂದಿನ ಚಂದಾದಾರರು ತಮ್ಮ ಚಂದಾ ಕ್ರಮಸಂಖ್ಯೆಯನ್ನು ತಪ್ಪದೆ ಪ್ರತಿ ಕಾಗದಲ್ಲೂ ಬರೆಯಬೇಕು. ಬರೆಯಿರಿ — ಸಂಪಾದಕರು
ಸೇಲ್ಸ್‌ವಿಂಗ್. ತಿ.ತಿ.ದೇ. ತಿರುಪತಿ.

# ತಿಂಗಳಿನ ಮುಖ್ಯದಿನಗಳು

## ಏಪ್ರಿಲ್ 1987

| | | |
|---|---|---|
| 3. | ಶುಕ್ರವಾರ | ಶ್ರೀ ಕೋದಂಡರಾಮಸ್ವಾಮಿ ಬ್ರಹ್ಮೋತ್ಸವದಲ್ಲಿ ಗರುಡೋತ್ಸವ |
| 4. | ಶನಿವಾರ | ಶ್ರೀ ಕೋದಂಡರಾಮಸ್ವಾಮಿ ಬ್ರಹೋತ್ಸವ ಸಮಾಪ್ತಿ |
| 7. | ಮಂಗಳವಾರ | ಶ್ರೀರಾಮನವಮಿ |
| 8. | ಬುಧವಾರ | ಶ್ರೀರಾಮಪಟ್ಟಾಭಿಷೇಕ |
| 12. | ಭಾನುವಾರ | ತಿರುಮಲೆಯಲ್ಲಿ ಶ್ರೀವೆಂಕಟೇಶ್ವರಸ್ವಾಮಿ ವಸಂತೋತ್ಸವಾರಂಭ |
| 13. | ಸೋಮವಾರ | ನಾಗಲಾಪುರಂ ಶ್ರೀವೇದನಾರಾಯಣಸ್ವಾಮಿ ಬ್ರಹ್ಮೋತ್ಸವ ಅಂಕುರಾರ್ಪಣೆ ತಿರುಮಲೆಯಲ್ಲಿ ಶ್ರೀವೆಂಕಟೇಶ್ವರಸ್ವಾಮಿ ರಜತ ರಥೋತ್ಸವ |
| 14. | ಮಂಗಳವಾರ | ತಿರುಮಲೆಯಲ್ಲಿ ಶ್ರೀವೆಂಕಟೇಶ್ವರಸ್ವಾಮಿ ವಸಂತೋತ್ಸವ ಸಮಾಪ್ತಿ. ಚಿತ್ರಾಪೂರ್ಣಿಮೆ |
| 18. | ಶನಿವಾರ | ನಾಗಲಾಪುರಂ ಶ್ರೀವೇದನಾರಾಯಣಸ್ವಾಮಿ ಗರುಡೋತ್ಸವ |
| 21. | ಮಂಗಳವಾರ | ನಾಗಲಾಪುರಂ ಶ್ರೀ ವೇದನಾರಾಯಣಸ್ವಾಮಿ ರಥೋತ್ಸವ |
| 22. | ಬುಧವಾರ | ನಾಗಲಾಪುರಂ ಶ್ರೀವೇದನಾರಾಯಣಸ್ವಾಮಿ ಬ್ರಹ್ಮೋತ್ಸವ ಧ್ವಜಾವರೋಹಣ |
| 24. | ಶುಕ್ರವಾರ | ಶ್ರೀಭಾಷ್ಯಕಾರ ಉತ್ಸವ ಪ್ರಾರಂಭ |
| 30. | ಗುರುವಾರ | ಶಿವಾಜಿ ಜಯಂತಿ. ಬಸವೇಶ್ವರ ಜಯಂತಿ |

## ಗಮನಿಕೆ

ವಿವಿಧಭಾಷೆಗಳಲ್ಲಿ ಸ
ಪ್ರಚಾರ, ಆಸ್ತಿಕರ ಅಭಿವ
ದಿನ ಪ್ರವರ್ಧಮಾನವಾಗುತಿ
ಕೆಲವರು ಚಂದಾದಾರರಿಗೆ
ಗಳು ಲಭಿಸದೆ ಹೋಗುತ್ತಿವ
ಸಪ್ತಗಿರಿಯನ್ನು ಕೋರುವ
ಸೂಚನೆಗಳನ್ನು ಗಮನಿಸ
ತ್ತೇವೆ.

* ಸಪ್ತಗಿರಿಯನ್ನು ಕೋರ
ತಿಂಗಳಿನಲ್ಲಿ 15 ನೇ ತಾರ
ಚಂದಾ ಹಣವನ್ನು ಕ
ನಂತರ ಕಳುಹಿಸಿದವರಿಗೆ
ತಿಂಗಳಿನಿಂದ ಮಾತ್ರವೇ ಪ
ಗುತ್ತದೆ.

* ಹೊಸ ಚಂದಾದಾರರು
ಕೂಪನಿನಲ್ಲಿ 'ಹೊಸಚಂ
ಬರೆಯಬೇಕು. ಮಿಕ್ಕ
ಕೂಪನಿನಲ್ಲಿ ತಮ್ಮ ಚಂದಾ
ನಮೂದಿಸಬೇಕು. ಹಿಂದಿ
ತಮ್ಮ ವಿಳಾಸದ ಕಾಗದ
ಸಿದರೂ ಬಹಳ ಸೌಕರ್ಯ

* ಸಪ್ತಗಿರಿ ಪ್ರತಿಗಳಿಗೆ
ಹಣವನ್ನಾಗಲಿ, ಇತರ ವಿ
ಕೆಳಗಿನ ವಿಳಾಸಕ್ಕೆ ಮಾತ್ರ
ಬೇಕು.

ಸ

ತಿರು

Edited and Published on behalf of the T. T. Devasthanams by K. Subba Rao, M.A., and Printed at

